‘ ಕರ್ತವ್ಯಾನಂದ ’

# ಶ್ರೀ ರಾಜಪುರೋಹಿತರು

ಶ್ರೀನಿವಾಸ ಹಾವನೂರ



ಪರಾಗ ಪ್ರಕಾಶನ, ಧಾರವಾಡ

श्री नारायणराव राजपुरोहित मेरे एक घनिष्ठ मित्र थे। उनका पहिला परिचय तब हुआ कि जब मैं कुछ चालीस साल पहिले धारवाड पहुंचा था। मेरे मित्र श्री हुक्केरीकरने उनका परिचय कराया। श्री राजपुरोहित बहुत दरिद्रावस्था में थे। तो भी उनकी प्रकृति अत्यंत स्वाभिमानी थी। पुराने शिला ताम्र लेखोंका बहुत गहरा अध्ययन उन्होंने किया था। कर्नाटक भर में स्वयं घूमकर उपेक्षित शिलाशासनोंको ढूँढकर उनका वाचन करके और उनके छाप लेकर राजपुरोहितजीने बहुत लेख लिखे। नया ज्ञान लोगोंको दिया। कर्नाटक चालुक्यादिका इतिहास और प्रकाशित हुआ। वैसे देखा जाय तो कर्नाटक देशका पुराना इतिहास बहुत ही गौरवास्पद और विजयशाली है। विद्वान कवि और वीर इन्हींसे वह इतिहास पूरा भरा हुआ है। सुशोभित स्फूर्तिदायक और वैभवसूचक है। किंतु यह सिद्ध होता है शिलाशासनोंसे। और हलेबीडु आदि स्थलोंकी सामग्री उपेक्षित ही रही। जगह जगहपर जाकर नारायणराव कष्ट करते रहे। जागृति करते रहे। उत्तरायुष्यमें वह महाराष्ट्रमें भी अधिक घूमें। वह इस लोकको छोड जल्दि ही चल पडे। इसका हमें बहुत खेद है। इतिहासका बहुत नुकसान हुआ है। जब कर्नाटक जागृत होगा और फिर पूर्व गौरवको पहुंचेगा तब उसको उन्नत करनेवालोंमें श्री राजपुरोहितजी का नाम अवश्य होना चाहिये।

महामहोपाध्याय द. वा. पोतदार

ता. १०–१–'५८
पुणे



‘ ಕರ್ತವ್ಯಾನಂದ ’

# ಶ್ರೀ ರಾಜಪುರೋಹಿತರು

ಶ್ರೀನಿವಾಸ ಹಾವನೂರ

ಪರಾಗ ಪ್ರಕಾಶನ, ಧಾರವಾಡ

ಮುದ್ರಕರು :

ಶ್ರೀ. ಎಮ್. ಜಿ. ಪಾಲೇಕರ,
ವಸಂತ ಮುದ್ರಣಾಲಯ,
ಧಾರವಾಡ



ಪ್ರಕಾಶಕರು :

ಶ್ರೀ. ರಾಮಚಂದ್ರ ಕೊಟ್ಟಲಗಿ
ಶ್ರೀ. ಲಕ್ಷ್ಮಣರಾವ ಬೇಂದ್ರೆ
ಪರಾಗ ಪ್ರಕಾಶನ,
ಧಾರವಾಡ







ಬೆಲೆ :

೧ ರೂಪಾಯಿ



೧೯೫೮

ನನ್ನ

ಬಾಲ್ಯದ ಹಿತೈಷಿ

ಮುಂಬಯಿ ರಹವಾಸಿ

**ಲಕ್ಷ್ಮೇಶ್ವರ ರಾಜಣ್ಣನಿಗೆ**

— ಲೇಖಕ

## ಪರಿವಿಡಿ

ಪ್ರಸ್ತಾವನೆ

ಜೀವನ

ಸಂಶೋಧನ ಕಾರ್ಯ

ವ್ಯಕ್ತಿ

ಫಲ ಶ್ರುತಿ

ಅನುಬಂಧಗಳು

೧. ದಿನಚರಿಯ ಕೆಲವು ಪುಟಗಳು

೨. ರಾಜಪುರೋಹಿತ ಲೇಖನ ಸೂಚಿ

ಶ್ರದ್ಧಾಂಜಲಿ.

# ಪ್ರಸ್ತಾವನೆ

ಶ್ರಾವಣ ಶುದ್ಧ ಪೂರ್ಣಿಮೆ. ಮನೆಯ ಹೊರಗೆ ಬೆಳದಿಂಗಳು ವ್ಯಾಪಿಸಿತ್ತು. ಆದರೆ ಮನೆಯೊಳಗೆ? ವೇದನೆಯಿಂದ ಬಳಲುತ್ತಿದ್ದ ನನ್ನ ತಂದೆ, ಅವರ ಹತ್ತಿರ ನನ್ನ ತಾಯಿ, ಇಬ್ಬರು ತಂಗಿಯರು, ಮತ್ತು ನನ್ನ ತಾಯಿಯ ಸೋದರತ್ತೆ ಇಷ್ಟು ಜನ ಕುಳಿತಿದ್ದೆವು.

ತಂದೆ ಕುಡಿಯಲು ನೀರು ಬೇಡಿದರು. ತಾಯಿ ನೀರು ತಂದು ಕುಡಿಸುತ್ತಿದ್ದಾಗ, ಅವರು ಗಟಗಟನೆ ಕುಡಿಯ ಹತ್ತಿದರು. ಯಾವಾಗಲೂ ಶಾಂತ ಮತ್ತು ಸಮಾಧಾನ ಪ್ರಕೃತಿಯವರಾದ ಅವರ ಇಂದಿನ ನೀರು ಕುಡಿಯುವ ರೀತಿಯನ್ನು ನೋಡಿ ನನಗೆ ಗಾಬರಿಯಾಯಿತು. ಸಾಯುವ ಕಾಲದ ದಾಹವಿರಬೇಕು ಎಂದೆನಿಸಿತು. 'ಅವರಿಗಿನ್ನು ಗುಣವಾಗುವದು', ಎಂದು ಮನೆಯವರಿಗೆ ಸಮಾಧಾನ ಹೇಳಿ, ಹಿರಿಯ ಅಕ್ಕನನ್ನು ಊರಿಗೂ ಕಳಿಸಿದ ನಾನೇ ಜೋರಾಗಿ ಅಳತೊಡಗಿದೆನು. ಇತರರೂ ದನಿಗೂಡಿಸಿದರು. ಆಗ ನನ್ನ ತಂದೆಯು ನನ್ನನ್ನು ಕುರಿತು :

' ಎಂಥ ಹುಚ್ಚ ನೀನು ! ಎಂದಿನಿಂದಲೂ ನೀನು ಭಾವನಾಪ್ರಧಾನನು ! ನನಗೇನಾಗಿದೆ? ನಾನು ಇನ್ನೂ ಬದುಕುವೆ. ಶ್ರೀ. ಹುಕ್ಕೇರಿಕರರು ಸರಕಾರಕ್ಕೆ ನನ್ನ ಹೆಸರು ಸಿಫಾರಸು ಮಾಡಿದ್ದಾರೆ. ಅವರ ಪ್ರಯತ್ನದಿಂದ ನಮಗೆ ಸಾಕಷ್ಟು ಹಣ ಬರುವದು. ನಮ್ಮ ಅಡಚಣಿ ನೀಗುವವು. ನನಗೆ ವೇದನೆ ಹೆಚ್ಚಾಗಿ ಗಟಗಟ ನೀರು ಕುಡಿದೆ, ಅಷ್ಟೆ. ನೀನು ಆಗ ಮಿಲಿಟರಿಯಲ್ಲಿದ್ದೆ. ನಾನು ಸೊಲ್ಲಾಪುರದಲ್ಲಿ ಬೇಂದ್ರೆಯವರ ಮನೆಯಲ್ಲಿದ್ದೆ. ಆಗ ಇದಕ್ಕೂ ಹೆಚ್ಚಿಗೆ ಜಡ್ಡಾಗಿತ್ತು."

ಎಂದು ಹೇಳುತ್ತ ಹಾಸಿಗೆಯಲ್ಲಿಯೇ ಸ್ವಲ್ಪ ಎದ್ದು ಕೂಡುವ ಪ್ರಯತ್ನ ಮಾಡಿದರು. ಅವರಿಗೆ ನನ್ನ ತೊಡೆಯ ಆಶ್ರಯವನ್ನು ಕೊಟ್ಟೆ.

"ನಿನಗೆ ಎಷ್ಟೇ ಆದರೂ ನೌಕರಿಯಿಂದ ಸಂಬಳ ಸಿಗುವದು. ನನಗೆ ಇಷ್ಟೇ ಎಂದು ಗಳಿಕೆ ಇರಲಿಲ್ಲ. ನನ್ನ ಸನ್ಮಿತ್ರರೇ ನನಗೆ ಕಾಲಕಾಲಕ್ಕೆ ಸಹಾಯ ಸಲ್ಲಿಸಿದರು. ಜಾತಿ, ಮತ, ಪಂಥ ಎಣಿಸದೇ ಅಖಿಲ ಕರ್ನಾಟಕ ಅದೇಕೆ ಮಹಾರಾಷ್ಟ್ರದ ಮಿತ್ರರೂ ಸಹಿತ ನನ್ನನ್ನು ಮುನ್ನಡೆಸಿದರು........ ನನಗೆ ಇನ್ನೂ ಬದುಕಬೇಕಾಗಿದೆ. ಶ್ರೀಕೃಷ್ಣ ಚರಿತ್ರೆಯನ್ನು ಬರೆಯಬೇಕಾಗಿದೆ. ಒಂದು ಉತ್ತಮ ದರ್ಜೆಯ ಪತ್ರಿಕೆಯನ್ನು ತೆಗೆಯುವೆ. ನನ್ನ ಆತ್ಮವೃತ್ತವನ್ನು ಬರೆಯಬೇಕೆಂದಿದ್ದೇನೆ....." ಮಾತನಾಡುತ್ತ ಆಡುತ್ತ ಅವರು ಶಾಂತರಾದರು.

ನನಗೆ ತುಸುವೇ ಜಂಪು ಹತ್ತಿತ್ತು. ಕೆಲ ಹೊತ್ತಿನ ಮೇಲೆ ನನ್ನ ತಾಯಿ ಕೂಗಿದರು. "ತಮ್ಮಾ, ಏಳು! ಎದ್ದು ಕೂತಾರ!" ಎಂದು. ಎದ್ದು ಕುಳಿತು ಮುಗಿದ ಕೈಗಳಿಂದ ಸಾವನ್ನು ಬರಮಾಡಿಕೊಳ್ಳುತ್ತಿದ್ದರು.

ಈಗ ಅವರಿಗೆ ಗಂಗಾಜಲ ಬೇಕಾಗಿತ್ತು. ಬೆಸೆದ ಗಿಂಡಿಯೊಳಗಿಂದ ಗಂಗೆಯು ಹರಿದು ಬರುವಷ್ಟರಲ್ಲಿ, ಅವರ ಪ್ರಾಣ ಪಕ್ಷಿಯು ಹುಣ್ಣಿಮೆಯ ಬೆಳುದಿಂಗಳ ಬಯಲಿನಲ್ಲಿ ಹಾರಿ ಹೋಯಿತು.

ಬೆಳಗಿನಲ್ಲಿ ಆಗಬೇಕಾದ ವಿಧಿಗಳು ಮುಗಿದುವು. ಮೊಟ್ಟಮೊದಲು ಶ್ರೀ ಆಲೂರ ವೆಂಕಟರಾಯರು ಬಂದರು. ನೆರೆಯ ಡಾ. ಕಮಲಾಪೂರರೂ ಇತರ ಹಿರಿಯ ಮಿತ್ರರೂ ಬಂದು ಸಮಾಧಾನದ ಮಾತುಗಳನ್ನು ಆಡಿದರು. ಮಾರನೆಯ ದಿನದ ಪತ್ರಿಕೆಗಳು ಮರಣದ ಸುದ್ದಿಯನ್ನು ಹೊತ್ತು ತಂದವು. ಸಂಘ ಸಂಸ್ಥೆಗಳ ದುಃಖ ಸೂಚಕ ಠರಾವುಗಳು ಬಂದುವು. ಸರ್ವಶ್ರೀ ದ. ಪ. ಕರಮರಕರ, ದ. ವಾ. ಪೋದ್ದಾರ, ಮತ್ತು ಇನ್ನೂ ಅನೇಕರಿಂದಲೂ ಪತ್ರಗಳು ಬಂದುವು.

ಸೂತಕದ ಒಂದೊಂದು ದಿನವೂ ಯುಗವಾಗಿ ಕಳೆದು ಅದೇ ಮುಗಿದಿದ್ದುವು. ಒಂದು ದಿನ ಬೆಳಗಿನಲ್ಲಿ ಚಹ ಕುಡಿಯುತ್ತ ಕುಳಿತಿದ್ದಾಗ "ರಾಜ-ಪುರೋಹಿತ" ಎಂದು ಯಾರೋ ಕೂಗಿದರು. ನನಗಿಂತಲೂ ವಯಸ್ಸಿನಿಂದ, ಆಕಾರದಿಂದ ಚಿಕ್ಕ ವ್ಯಕ್ತಿ. ಸಾದಾ ವೇಷ ಭೂಷ. ಯಾರೆಂದು ತಿಳಿಯಲಿಲ್ಲ.

"ನನಗ ಐರಣಿ ಶ್ರೀನಿವಾಸ ಅಂತಾರ. ಮೊನ್ನೆ ಮೊನ್ನೆ ಹಾವನೂರ ಅಂತ ಅಡ್ಡಹೆಸರು ಬದಲು ಮಾಡಿಕೊಂಡೇನಿ. ಸೇಲ್ಸ ಟ್ಯಾಕ್ಸ ಇನಸ್ಪೆಕ್ಟರ ಇದ್ದೇನಿ. ನಿಮ್ಮ ತಂದೆಯವರ ಬಗ್ಗೆ ಒಂದು ಲೇಖ ಬರಿಯಬೇಕಾಗಿತ್ತು. ಸ್ವಲ್ಪ ಮಾಹಿತಿ, ಲೇಖನ ವಗ್ಯೆರೆ ನೋಡಲಿಕ್ಕೆ ಬಂದಿದ್ದೆ." ಎಂದರು.

ಮನೆತನಕ ಬಂದು ಕೇಳಿದವರಿಗೆ ಮಾಡಬೇಕಾದ ಧರ್ಮ ಎಂದು ಕೊಂಡು, ಅವರಿಗೆ ಶಕ್ಯವಿದ್ದಷ್ಟು ತೋರಿಸಿದೆ. ಒಂದೆರಡು ತಾಸು ಇದ್ದು "ಮತ್ತೊಮ್ಮೆ ಬರುತ್ತೇನೆ" ಎಂದು ಹೇಳಿದರು. ಸರಿ, ಅಲ್ಲಿಗೆ ಮುಗಿದಂತಾಯಿತು ಎಂದುಕೊಂಡಿದ್ದೆ.

ಮತ್ತೆ ಅವರು ರವಿವಾರ, ರಜೆಯ ದಿನಗಳಲ್ಲಿ ೫-೬ ಬಾರಿ ಬಂದರು. ಪರಿಚಯ ಹೆಚ್ಚಿತು. ಅವರು ಎಡತಾಕುವದನ್ನು ಕಂಡು ನನಗೆ ಸಂಕೋಚ

ವಾಗಿ ನನ್ನ ತಂದೆಯವರ ಎಲ್ಲ ದಿನಚರಿಗಳನ್ನೂ ಅವರಿಗೆ ಕೊಟ್ಟೆನು. ಒಂದು ಲೇಖಕ್ಕೆ ಮಾಹಿತಿ ಎಂದು ಬಂದವರು, ಪುಸ್ತಕವನ್ನೆ ಬರೆಯುವ ಎತ್ತುಗಡೆಯಲ್ಲಿದ್ದಂತೆ ಕಂಡಿತು. ಆದರೆ ಅದನ್ನು ಪ್ರಕಟಮಾಡುವವರಾರು, ಸುಮ್ಮನೆ ತೊಂದರೆ ತೆಗೆದುಕೊಳ್ಳುತ್ತಿದ್ದಾರೆ, ಎಂದುಕೊಂಡೆ. ಸ್ವಲ್ಪ ಮರೆತೂ ಬಿಟ್ಟೆದ್ದೆ.

ಒಂದೆರಡು ತಿಂಗಳ ಮೇಲೆ ಹುಬ್ಬಳ್ಳಿಯಿಂದ ಅವರ ಪತ್ರ ಬಂತು, "ಚರಿತ್ರೆಯನ್ನು ಬರೆದು ಮುಗಿಸಿದ್ದೇನೆ. ನಿಮ್ಮ ತಂದೆಯ ಅನೇಕ ಸ್ನೇಹಿತರಿಂದಲೂ ವಿಷಯ ಸಂಗ್ರಹಿಸಿದ್ದೇನೆ. ನಿಮ್ಮ ದಿನಚರಿ ಇ. ಕಾಗದಗಳನ್ನು ಮರಳಿ ಕಳಿಸಿದ್ದೇನೆ. ಪ್ರಕಟನೆಯ ಎತ್ತುಗಡೆಯಲ್ಲಿದ್ದೇನೆ. ಅದಕ್ಕಾಗಿ ಶ್ರೀಗಳಾದ ಮೊಹರೆ, ಪುರೋಹಿತರನ್ನು ಕೇಳಬೇಕೆಂದಿದ್ದೇನೆ. ಅವರನ್ನು ಬಿಟ್ಟು ಬೇರೆಯವರಿಲ್ಲ. ವಾರಪತ್ರಿಕೆಯಲ್ಲಿ ಧಾರಾವಾಹಿಯಾಗಿ ಚರಿತ್ರೆಯೊಂದು ಹಾಕುವುದರಲ್ಲಿ ಔಚಿತ್ಯವೇನೂ ಇಲ್ಲ. ಆದರೆ ನಿಮ್ಮ ತಂದೆ ಸೋಸಿದ ಕಷ್ಟನಷ್ಟಗಳು, ಅವರು ಮಾಡಿದ ಕಾರ್ಯ, ವ್ಯಾಪಕವಾಗಿ ಗೊತ್ತಾಗಬೇಕೆನ್ನುವ ಉದ್ದೇಶ ನನ್ನದು."

ನನ್ನ ತಂದೆ ತೀರಿಕೊಂಡ ಕೆಲವೇ ತಿಂಗಳುಗಳ ಹಿಂದೆ, ಮೊಹರೆಯವರು ನೂರು ರೂಪಾಯಿಗಳನ್ನು ಅವರಿಗೆ ಕೊಟ್ಟು, "ನನಗೆ ಈ ಹಣ ಪರತು ಬೇಡ. ಅದರ ಬದಲಾಗಿ, ಕರ್ನಾಟಕದಲ್ಲಿಯ ಸ್ವಾತಂತ್ರ್ಯ ಸಂಗ್ರಾಮದ ಪ್ರಾರಂಭಿಕ ಚರಿತ್ರೆಯನ್ನು ಬರೆದುಕೊಡಿರಿ" ಎಂದು ಹೇಳಿದ್ದನ್ನು ಕೃತಜ್ಞತೆಯಿಂದ ಸ್ಮರಿಸಿಕೊಂಡೆನು.

ಅಷ್ಟರಲ್ಲಿ 'ಕರ್ಮವೀರ'ದಲ್ಲಿ ಲೇಖನ ಮಾಲೆ ಪ್ರಕಟವಾಗತೊಡಗಿತು. (ಡಿಸೆಂಬರ ೧೯೫೩). ಅದನ್ನು ಪುಸ್ತಕರೂಪದಲ್ಲಿ ತರುವ ಕೆಲಸ ಮಾತ್ರ ನಿಮ್ಮದು ಎಂದು ಹಾವನೂರರು ಹೇಳಿದರು. ನನ್ನ ತಂದೆಯವರೇ ತಮ್ಮ ಚರಿತ್ರೆ ಬರೆಯಬೇಕೆಂದಿದ್ದರು. ಈಗ ಶ್ರೀ. ಹಾವನೂರರ ಕಾರ್ಯದಿಂದ ಅವರ ಆತ್ಮವು ಖಂಡಿತ ತೃಪ್ತಿ ಹೊಂದಿರಬೇಕು.

ಅವರೇನೊ ಆಡಿದಂತೆ ಮಾಡಿದರು. ನನ್ನ ತಂದೆಯು ವಿಶೇಷ ಪರಿಚಯವಿಲ್ಲದಿದ್ದರೂ ನಾಡಿಗೆ ಸೇವೆ ಸಲ್ಲಿಸಿದ ಒಬ್ಬ ವ್ಯಕ್ತಿಯೆಂಬ ಭಾವನೆಯಿಂದ ತಮ್ಮ ಕರ್ತವ್ಯಾಂಜಲಿಯನ್ನು ಅರ್ಪಿಸಿದರು.

ನನಗೆ ಮಾತ್ರ ಈ ನಾಲ್ಕು ವರ್ಷಗಳ ಕಾಲ ಈ ಬಗ್ಗೆ ಏನನ್ನೂ ಮಾಡಲಿಕ್ಕಾಗಲಿಲ್ಲ. ಮೊನ್ನೆ ಒಂದು ನಾಟಕದಲ್ಲಿ ಇಬ್ಬರೂ ಅಭಿನಯಿಸುವ

ಪ್ರಸಂಗ ಬಂದಾಗ, ಅವರೊಡನೆ ಮನ ಬಿಚ್ಚಿ ಮಾತನಾಡುವುದಕ್ಕೂ ಸಂಕೋಚವಾಗತೊಡಗಿತು. ಅಂದೇ ರಾತ್ರಿ ನಿರ್ಧರ ಮಾಡಿದೆ. ಏನಾದರೂ ಮಾಡಿ ಪುಸ್ತಕವನ್ನು ಪ್ರಕಟಿಸುವ ಪ್ರಯತ್ನಮಾಡಬೇಕು ಎಂದು. ಶ್ರೀ. ಎಮ್. ಜಿ. ಪಾಲೇಕರರು ಪ್ರೆಸ್ಸಿನ ರೀತಿಯ ನೆರವನ್ನು ಕೊಡುವುದಕ್ಕೆ ಮುಂದೆ ಬಂದರು. ಶ್ರೀ. ಕೊಟ್ಟಲಗಿಯವರು ಪ್ರಕಾಶನದ, ಇತರ ಹೊಣೆ ಹೊತ್ತರು. ಅಂತೆಯೇ ನನ್ನ ಕೆಲಸ ಸುಲಭವಾಯಿತು.

ನನ್ನ ತಂದೆ ಗತಿಸಿ ನಾಲ್ಕು ವರ್ಷಗಳಾದ ಮೇಲೆಯೂ ಅವರ ಬಗ್ಗೆ ನಾಲ್ಕು ಜನರಲ್ಲಿ ಆದರ ಭಾವವಿದ್ದುದನ್ನು ಕಂಡು ನನಗೆ ಆಶ್ಚರ್ಯವಾಯಿತು; ಸಂತೋಷವಾಯಿತು. ಕೂಡಲೇ, ನಾನೂ ಹಾವನೂರರೂ ಕೆಲವರಿಂದಾದರೂ ಶ್ರದ್ಧಾಂಜಲಿಗಳನ್ನು ಬರೆಯಿಸಬೇಕೆಂದು ನಿರ್ಧರಿಸಿದೆವು. ಕೇಳಿದ ಕೂಡಲೇ ಅವರೆಲ್ಲ ಬರೆದು ಕೊಟ್ಟರು. ವೇಳೆ ಇಲ್ಲದ್ದರಿಂದ ಇನ್ನು ಕೆಲ ಆತ್ಮೀಯರನ್ನು ಕೇಳಲಾಗಲಿಲ್ಲ. ಇನ್ನು ಮುಂದೆ, ನನ್ನ ತಂದೆಯವರ ಎಲ್ಲ ಕೃತಿಗಳನ್ನು ಸಂಕಲಿಸಿ ಪ್ರಕಟಿಸಬೇಕೆನ್ನುವ ಮುಂದಿನ ಯೋಜನೆಗೆ ಧೈರ್ಯ ಬಂದಂತಾಯಿತು.

ಇನ್ನೂ ಅನೇಕ ಹಿರಿ–ಕಿರಿಯರ ಋಣ ಭಾರದಲ್ಲಿ ನನ್ನ ತಂದೆಯವರು ಇದ್ದಾರೆ. ಅವರಿಗೆ ಆರ್ಥಿಕ ಸಹಾಯವನ್ನು ನೀಡಿದ ಮತ್ತು ಅವರ ಸಂಶೋಧನದ ಕೆಲಸದಲ್ಲಿ ನೆರವಾಗಿ ಪ್ರೋತ್ಸಾಹಿಸಿದವರು ನೂರಾರು ಜನರಿದ್ದಾರೆ. ಅವರೆಲ್ಲರ ಋಣವನ್ನು ನಾನು ಶಿರೋಧಾರಣ ಮಾಡಿ, ಈ ಮೂಲಕ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

ನನ್ನ ತಂದೆ ತೀರಿಕೊಂಡ ಒಂದೂವರೆ ವರ್ಷದಲ್ಲಿ, ನನ್ನ ಕಿರಿಯ ತಮ್ಮ ನದಿಯಲ್ಲಿ ಈಸ ಹೋಗಿ, ತೀರಿಕೊಂಡನು. ಈ ಪುಸ್ತಕದ ಮುದ್ರಣ ನಡೆದಿದ್ದಾಗ, ತಂದೆಯ ಬಗ್ಗೆ ಅವನು ಬರೆದ ಒಂದು ಲೇಖವು ಸಿಕ್ಕಿತು. ಅದನ್ನು ಶ್ರೀ ಹಾವನೂರರಿಗೆ ತೋರಿಸಿದೆ. “ನಾನು ಇಷ್ಟು ಕಷ್ಟಪಟ್ಟದ್ದೂ ಒಂದೇ. ಅವನ ಈ ಚಿಕ್ಕ ಲೇಖವು ಪರಿಣಾಮದಲ್ಲಿ ನನ್ನ ಚರಿತ್ರ ಲೇಖನಕ್ಕೂ ಮಿಗಿಲು” ಎಂದರು. ಅದನ್ನು ಕೊನೆಯಲ್ಲಿ ಪ್ರಕಟಿಸಿದ್ದಾಗಿದೆ.

—ಸುರೇಶ ರಾಜಪುರೋಹಿತ

೧೦-೧-೫೮

# ಕರ್ತವ್ಯಾನಂದ

# ಶ್ರೀ. ರಾಜಪುರೋಹಿತರು

## ೧. ಜೀವನ

ಸುಪ್ರಸಿದ್ಧ ಇತಿಹಾಸ ಸಂಶೋಧಕರಾಗಿದ್ದ ನಾರಾಯಣ ಶ್ರೀನಿವಾಸ ರಾಜಪುರೋಹಿತರು ದಿನಾಂಕ ೨೪-೮-೧೯೫೩ ರಂದು ಬೆಳಗಿನ ಜಾವದಲ್ಲಿ ತೀರಿಕೊಂಡರು.

ಯಾರೊಬ್ಬ ಜೀವನವೃತ್ತವನ್ನು ಬರೆಯುವುದಿದ್ದಾಗ, ಅವರು ಎಂದು ಹುಟ್ಟಿದರೆಂಬುದರಿಂದ ಆರಂಭಿಸಬೇಕು. ಇಲ್ಲಿ ಸಾವಿನಿಂದ ಆರಂಭಿಸಲಾಗಿದೆ. ಆದರೆ ಯಾರ ಜೀವನವು ಅತ್ಯಂತ ದಾರುಣವಾದದ್ದಾಗಿ ಕಳೆಯಿತೊ, ಅವರ ಚರಿತ್ರೆಯನ್ನು ಸಾವಿನಿಂದ ಆರಂಭ ಮಾಡಿದರೆ ಅಮಂಗಳಕರವೇನೂ ಅಲ್ಲ.

ಸ್ವತಃ ರಾಜಪುರೋಹಿತರು ಸಾವನ್ನು ನಿಕೃಷ್ಟವಾಗಿ ಕಂಡವರೂ ಅಲ್ಲ, ಅದಕ್ಕೆ ಹೆದರಿದವರೂ ಅಲ್ಲ. ಅವರು ತಮ್ಮ ಕರ್ತವ್ಯವನ್ನು ತಾವು ಮಾಡುತ್ತ ಹೋಗುವವರಾಗಿದ್ದರು. ದುಃಸಹವಾದ ಬಡತನದ ಹಿನ್ನೆಲೆಯಲ್ಲಿ, ಅವ್ಯಾಹತವಾದ ಸಂಶೋಧನೆಯನ್ನು ಅವರು ಕೈಕೊಂಡರು. ಅವರ ಬಡತನ ಹೆಚ್ಚುವದಕ್ಕೆ ಸಂಶೋಧನೆಯು ತುಂಬಾ ನೆರವಾಯಿತು! ಅವರು ಸಂಶೋಧನದಲ್ಲಿ ಹೆಚ್ಚುಹೆಚ್ಚು ತೊಡಗುವಂತಾದುದಕ್ಕೆ ಬಡತನವೂ ನೆರವಾಯಿತು! ಅವೆರಡೂ ಒಂದಕ್ಕೊಂದು ಪೋಷಕವಾಗಿದ್ದುವೆಂಬುದೇ ಅವರ ಜೀವನ ಸಾರ.

ಶ್ರೀ. ರಾಜಪುರೋಹಿತರಿಗೆ 'ಕರ್ತವ್ಯಾನಂದ' ಎಂಬ ಕಾವ್ಯನಾಮವಿದ್ದುದು ಅನೇಕರಿಗೆ ಗೊತ್ತಿಲ್ಲ. ಸಂಶೋಧನೆಯೆಂಬ ಕರ್ತವ್ಯವನ್ನು ಮಾಡುವುದರಿಂದಲೆ ಅವರು ಜೀವನದ ಆನಂದವನ್ನು ಕಂಡುಕೊಂಡರು. ಸಾವು ಬಂದಾಗ ಈ ಜನ್ಮದಲ್ಲಿ ನನ್ನ ಕರ್ತವ್ಯ ಇಲ್ಲಿಗೆ ಸಾಕು ಎಂದು ಭಗವಂತನಿಗೆ ಅರ್ಪಿಸಿರಬೇಕು ಎಂಬ ಭಾವನೆಯಿಂದ ಅದನ್ನು ಬರಮಾಡಿಕೊಂಡರು. 'ಕರ್ತವ್ಯಾನಂದ' ಎಂಬ ಬಿರುದುನಾಮವು ಅವರಿಗೆ ಎಷ್ಟೊಂದು ಅನ್ವರ್ಥಕವಾಗಿದೆ!

# ಪೂರ್ವ ಜೀವನ

ಶ್ರೀ. ರಾಜಪುರೋಹಿತರ ಜನ್ಮವಾದುದು ಹಾವೇರಿ ತಾಲೂಕಿನ ಅಗಡಿ ಗ್ರಾಮದಲ್ಲಿ, ದಿನಾಂಕ ೧೭-೭-೧೮೮೭ ರಂದು. ಅಗಡಿಯ ಸಂಸ್ಥಾನಿಕರಿಗೆ ಈ ಹಿಂದೆ ಗುರು ಸ್ಥಾನದಲ್ಲಿದ್ದುದರಿಂದ ಇವರ ಪೂರ್ವಜರಿಗೆ 'ರಾಜಪುರೋಹಿತ' ಎಂಬುದು ಅಡ್ಡಹೆಸರಾಯಿತು. ಅಂತೆಯೆ ಮನೆತನವು ಮೊದಲಿನಿಂದ ಅಲ್ಲಿಯೆ ನೆಲೆನಿಂತಿದ್ದಿತು. ಆದರೆ ಹೇಳಿಕೊಳ್ಳುವಂತಹ ಆಸ್ತಿಯೇನೂ ಇರಲಿಲ್ಲ.

ಅವರ ಬಾಲ್ಯ ಜೀವನ ಹೇಗೆ ಕಳೆಯಿತು ಎಂದು ಹೇಳುವ ಅವರ ಸಮವಯಸ್ಕರು ಯಾರೆಂದು ತಿಳಿಯದು. ಕನವಳ್ಳಿಯ ಅಕ್ನೂರ ಮಾಸ್ತರರೆಂಬವರು ಅವರ ಗುರುಗಳಾಗಿದ್ದರು. ಮಾಸತರ್ಪಣದ ಕಾಲಕ್ಕೆ, ಗುರುಮಾಲಿಕೆಯಲ್ಲಿ ಶ್ರೀ. ಅಕ್ನೂರ ಮಾಸ್ತರರಿಗೇ ರಾಜಪುರೋಹಿತರು ತರ್ಪಣವನ್ನು ಬಿಡುತ್ತಿದ್ದರು. ಅವರೇ ರಾಜಪುರೋಹಿತರಲ್ಲಿ ಕನ್ನಡ ಪ್ರೀತಿಯ ಸಸಿಯನ್ನು ನೆಟ್ಟವರು.

ಅಕ್ನೂರ ಮಾಸ್ತರರ ಕೈಯಲ್ಲಿ ಕಲಿತ ರಾಜಪುರೋಹಿತರು ಮುಲ್ಕೀ ಪರೀಕ್ಷೆ ಪಾಸಾದರು. ಸುಮ್ಮನೇ ಅಲ್ಲ, ಧಾರವಾಡ ಜಿಲ್ಲೆಗೆ ಪ್ರಥಮ ಸ್ಥಾನವನ್ನು ಪಡೆದರು. ಮುಂದೆ ತಮ್ಮ ಮನದಿಚ್ಛೆಯಂತೆ, ಗುರುಗಳ ಅಪೇಕ್ಷೆಯಂತೆ, ರಾಜಪುರೋಹಿತರೂ ಶಿಕ್ಷಕ ವೃತ್ತಿಗೇ ಅಂಟಿಕೊಂಡರು. ಮೂರು ವರ್ಷ ಬೇಸಿಕ್ ಟ್ರೇನಿಂಗ ಪಡೆದು, ೧೯೦೫ ರಲ್ಲಿ 'ಟ್ರೇಂಡ್' ಮಾಸ್ತರರಾಗಿ ನೌಕರಿಯನ್ನು ಸುರುವು ಮಾಡಿದರು.

ದೇಶದಲ್ಲಿ ಕ್ರಮೇಣ ರಾಜಕೀಯ ಜಾಗೃತಿಯಾಗುತ್ತಿದ್ದ ಕಾಲವದು. ಅದನ್ನು ಊರೂರಿಗೆ ಮುಟ್ಟಿಸುವ ಪತ್ರಿಕೆಗಳು ಆಗ ನಮ್ಮಲ್ಲಿ ಇರಲಿಲ್ಲ. ಅಂತೆಯೆ ಪುಣೆಯಿಂದ ಹೊರಡುತ್ತಿದ್ದ 'ಕೇಸರೀ' ಮಾಸಪತ್ರಿಕೆಯು ಪ್ರತಿಯೊಂದು ಕನ್ನಡ ಹಳ್ಳಿಯಲ್ಲಿ ನೋಡಸಿಗುತ್ತಿದ್ದಿತು. ತರುಣ ವಯಸ್ಸಿನ ರಾಜಪುರೋಹಿತರ ಮನಸ್ಸಿನ ಮೇಲೆ, ಆ ಪತ್ರಿಕೆಯು ಪ್ರಭಾವ ಬೀರಿದ್ದು ಅಚ್ಚರಿಯಲ್ಲ.

ಮುಂದೆ ವಂಗಭಂಗ ಚಳುವಳಿಯು ಆರಂಭವಾಗುತ್ತಲೂ ಸರಕಾರೀ ನೌಕರಿ ಬೇಡವೆಂದು, ೧೯೦೮ ರಲ್ಲಿ ಅದಕ್ಕೆ ರಾಜೀನಾಮೆಯನ್ನು ಕೊಟ್ಟರು.

ಆದರೆ ಶಿಕ್ಷಕ ವೃತ್ತಿಯನ್ನು ಬಿಡಲಿಲ್ಲ! ಶ್ರೀ. ಆಲೂರ ವೆಂಕಟರಾಯರು ಪ್ರಿನ್ಸಿಪಾಲರಾಗಿದ್ದ ರಾಷ್ಟ್ರೀಯ ಶಾಲೆಯನ್ನು ಸೇರಿದರು. ಅದೇ ಅವರಿಬ್ಬರ ಮೊದಲ ಭೆಟ್ಟಿ.

ಈ ಪ್ರಸಂಗವನ್ನು ಶ್ರೀಮಾನ್ ವೆಂಕಟರಾಯರು ಇನ್ನೂ ನೆನೆಸಿಕೊಂಡು ಹೇಳಬಲ್ಲರು. ಹುಡುಗನಂತಿದ್ದ ಇವರು ಪ್ರಿನ್ಸಿಪಾಲರ ಕೋಣೆಗೆ ಬಂದಾಗ "ಕ್ಲಾಸಿಗೆ ಸೇರಬೇಕೆನ್ನುವಿರಾ?" ಎಂದವರು ಕೇಳಿದರು.

"ಹೌದು! ಕಲಿಯಲಿಕ್ಕಲ್ಲ, ಕಲಿಸಲಿಕ್ಕೆ" ಎಂದು ರಾಜಪುರೋಹಿತರು ಉತ್ತರ ಕೊಟ್ಟರು. ಆ ದಿನದಿಂದಲೇ ಅವರು ಕಲಿಸುವ ವಿಷಯದಲ್ಲಿ ಅತ್ಯಂತ ಆಸ್ಥೆಯನ್ನು ತಳೆದರು. ಹಾಗೆ ಅವರಿಂದ ಕಲಿತವರಲ್ಲಿ ಕವಿವರ ಬೇಂದ್ರೆಯವರೂ ಒಬ್ಬರು. ಆ ಶಿಷ್ಯನ ಮೇಲೆ ರಾಜಪುರೋಹಿತರದು ವಿಶೇಷ ಪ್ರೀತಿ.

ಕಾರಣಾಂತರದಿಂದ ಆ ಶಾಲೆ ನಿಂತುಹೋಗಲು, ರಾಜಪುರೋಹಿತರಿಗೆ ಮುಂದೇನು ಮಾಡಬೇಕೆಂಬುದು ತೋಚಲಿಲ್ಲ. ಶ್ರೀ. ವೆಂಕಟರಾಯರ ಪರಿಚಯ ಮತ್ತು ಆಸರೆಗಳಿಂದಾಗಿ, ಇವರಲ್ಲಿಯೂ ಕನ್ನಡ ಗತವೈಭವದ ಹುಚ್ಚು ತಾಗಿತ್ತು. ಈ ಜ್ಞಾನಲಾಲಸೆಯ ಮೂಲಕ ಗ್ರಂಥ ವಾಚನದಲ್ಲಿಯೆ ತಮ್ಮ ವೇಳೆಯನ್ನು ಹೆಚ್ಚಾಗಿ ಕಳೆದರು.

## ಲೇಖನ ಕಾರ್ಯದ ಆರಂಭ

ಇಂತಹ ಸಮಯದಲ್ಲಿಯೇ ಅವರ ಮೊದಲ ಪುಸ್ತಕವು ಪ್ರಕಟವಾಯಿತು (೧೯೧೦). ಅದರ ಹೆಸರು 'ದಾನಧರ್ಮ ಪದ್ಧತಿ'. ಸಾರ್ವಜನಿಕ ಸೇವೆಯ ಹುಚ್ಚು ಧಾರವಾಡದಲ್ಲಿ ಕ್ರಮೇಣ ಪಸರಿಸುತ್ತಿದ್ದ ಕಾಲವದು! ನಮ್ಮ ಪ್ರಾಚೀನರು ಈ ವಿಷಯದಲ್ಲಿ ಮೊದಲು ಏನು ಹೇಳಿದ್ದಾರೆಂಬುದನ್ನು ಮೊದಲು ವಿವರಿಸಿ ಹಿಂದಿನ, ಇಂದಿನ ಹಲವು ದಾನಶೂರರ ಚರಿತ್ರೆಯನ್ನು ಇದರಲ್ಲಿ ಕೊಟ್ಟಿದ್ದಾರೆ. ಈ ಪುಸ್ತಕವು ರಾಜಪುರೋಹಿತರ ವ್ಯಾಸಂಗ ವೈವಿಧ್ಯವನ್ನೂ, ಸತ್ಕಾರ್ಯದಲ್ಲಿ ತಮ್ಮ ಜೀವನ ವಿನಿಯೋಗ ಮಾಡಬೇಕೆಂಬ ಅವರ ಉತ್ಕಂಠೆಯನ್ನು ತೋರಿಸುವಲ್ಲಿ ತುಂಬ ನೆರವಾಗುತ್ತದೆ. ಕನ್ನಡದ ಕೆಲಸ, ಅದು ಏನೇ ಇರಲಿ, ಪ್ರೋತ್ಸಾಹಿಸಲು ಬದ್ಧಕಂಕಣರಾದ ಶ್ರೀ. ಆಲೂರ ವೆಂಕಟರಾಯರೇ ಅದನ್ನು ಪ್ರಕಟಿಸಿದ್ದಾರೆ.

ಈ ವೇಳೆಗೆ ರಾಜಪುರೋಹಿತರ ವಿಚಾರ ಮತ್ತು ವ್ಯಾಸಂಗ ಇಬ್ಬಗೆಯಾಗಿ ಹರಿಯುತ್ತಿದ್ದಿತು. ಒಂದು ಆರ್ಯ ಧರ್ಮದತ್ತ, ಇನ್ನೊಂದು ಇತಿಹಾಸದತ್ತ. ಅವರ ಮನಸ್ಸು ಮೂಲತಃ ಧರ್ಮಪರವಾದುದು. ಶ್ರೀ ರಾಮಕೃಷ್ಣ ಪರಮಹಂಸ, ವಿವೇಕಾನಂದ ಮುಂತಾದವರ ಆಧ್ಯಾತ್ಮ ವಿಚಾರಗಳನ್ನು ಓದಿದ ಮೇಲೆ ಅವರ ಮನಸ್ಸು ಆ ಕಡೆ ಒಲೆದಿತ್ತು. ಇತ್ತ ಆಲೂರ ವೆಂಕಟರಾವ ಮತ್ತು ಅವರ ತಂದೆ ಭೀಮರಾಯರ ಪರಿಚಯದಿಂದಾಗಿ, ಕರ್ನಾಟಕ ಮಹಾರಾಷ್ಟ್ರಗಳ ಇತಿಹಾಸವೂ ಅವರನ್ನು ಸೆಳೆಯುತ್ತಿತ್ತು. ಆದರೂ ಆ ಕಾಲದಲ್ಲಿ ಕರ್ನಾಟಕದ ಇತಿಹಾಸವೆಂದರೆ ದಟ್ಟಡವಿಯಾಗಿಯೆ ಉಳಿದಿದ್ದಿತು. ಒಬ್ಬಿಬ್ಬರು ಆದರಲ್ಲಿ ಕಾಲಿಟ್ಟು ಬರಿಯೆ ಹಿಂತಿರುಗುವುದೇ ಆಗಿದ್ದಿತು.

ಕೇಸರೀ ಪತ್ರಿಕೆಯ ಸಂಪಾದಕರಾದ ನ. ಚಿ. ಕೇಳಕರರು ಮರಾಠೀ ಭಾಷೆಯ ಇತಿಹಾಸದ ಬಗ್ಗೆ ಲೇಖನಗಳನ್ನು ಆಮಂತ್ರಿಸಿದ್ದರು. ಕರ್ನಾಟಕದ ಬಗ್ಗೆ ಈಗಾಗಲೇ ಸಾಕಷ್ಟು ತಪ್ಪು ಅಭಿಪ್ರಾಯಗಳು, ಇತಿಹಾಸ ಭೈರವರಾದ ಡಾ. ಭಂಡಾರಕರರಂತಹರಲ್ಲಿ ಸಹಿತ ಒಡಮೂಡಿವೆಯೆಂದು ಶ್ರೀ. ರಾಜಪುರೋಹಿತರಿಗೆ ತಮ್ಮ ಅಭ್ಯಾಸದಲ್ಲಿ ಕಂಡುಬಂದಿತ್ತು. ಭಾಷೆಯ ವಿಷಯದಲ್ಲಿಯೂ ಇಂಥದೇ ಅನ್ಯಾಯವಾದೀತೆಂದು ಬಗೆದು, ಅವರು 'ವಾಚಕನ ಪತ್ರ'ವೆಂಬ ರೀತಿಯಲ್ಲಿ ಲೇಖನಗಳನ್ನು ಬರೆಯತೊಡಗಿದರು. ಆದಕ್ಕೆ ಶ್ರೀ. ಕೇಳಕರರು 'ಮಹಾರಾಷ್ಟ್ರ ವ ಕರ್ನಾಟಕ' ಎಂದು ನಾಮಕರಣ ಮಾಡಿ ಒಟ್ಟಿಗೆ ಏಳು ಲೇಖನಗಳನ್ನು ಎರಡು ವರ್ಷಗಳ ಕಾಲಾವಧಿಯಲ್ಲಿ ಪ್ರಕಟಿಸಿದರು.

ಪ್ರಾಚೀನ ಕರ್ನಾಟಕದ ಮೇರೆ, ದಕ್ಷಿಣದಲ್ಲಿ ಆಳಿದ ಪ್ರಸಿದ್ಧ ರಾಜವಂಶಗಳ ಕನ್ನಡತನ, ಜ್ಞಾನೇಶ್ವರಿಯಲ್ಲಿ ಬಂದ ಕನ್ನಡ ಶಬ್ದಗಳು ಇವನ್ನೆಲ್ಲ ವಿವರಿಸಿದರು. ಮಹಾರಾಷ್ಟ್ರದಿಂದ ಕರ್ನಾಟಕದ ಇತಿಹಾಸವನ್ನು ಬೇರ್ಪಡಿಸಿದುದೇ ಈ ಲೇಖನಗಳ ಮುಖ್ಯ ಸಾಧನೆಯಾಗಿದ್ದಿತು. ಮರಾಠಿಗರು ತಾವು ಮಹಾರಾಷ್ಟ್ರದವರೆಂದು ಇಂದು ಕರೆದುಕೊಳ್ಳುತ್ತಿದ್ದರೂ, ಹಿಂದೆ ಮಹಾರಾಷ್ಟ್ರವೆಂದು ಇದ್ದ ಪ್ರದೇಶವೆಲ್ಲ ಕರ್ನಾಟಕ ಪ್ರದೇಶವಾಗಿದ್ದಿತು ಎಂಬುದನ್ನು ಆಧಾರಪೂರ್ವಕವಾಗಿ ತೋರಿಸಿಕೊಟ್ಟರು.

ಲೇಖನಗಳು ಪ್ರಕಟವಾದ ಹಾಗೆಲ್ಲ ರಾಜಪುರೋಹಿತರಿಗೂ ಧೈರ್ಯ ಬಂದಿತು. ಅಲ್ಲಿಂದ, ವಿಠ್ಠಲನು ಕನ್ನಡಿಗನೆಂದು ಸಾರಿ ಹೇಳಿ, ವಿಠ್ಠಲನನ್ನು ಕರ್ನಾಟಕದ ಧಾರ್ಮಿಕ ಇತಿಹಾಸದ ಪೀಠದಮೇಲೆ ಪುನಃ ಪ್ರತಿಷ್ಠಾಪಿಸಿದರು.

ಮರಾಟಿಗರಿಗೆ ಹೊಸ ವಿಚಾರಗಳಿವು. ಮತ್ತೆ ಅಷ್ಟೊಂದು ಹಿತಕರವೂ ಆಗಿರಲಿಲ್ಲ. ತಮ್ಮ ನೆರೆಯವರಾದ ಕನ್ನಡಿಗರು ಕೆಲವೇ ಶತಕಗಳ ಹಿಂದೆ, ತಮ್ಮ ಮೇಲೆ ಎಲ್ಲ ರೀತಿಯಿಂದಲೂ ಆಧಿಪತ್ಯವನ್ನು ಹೊಂದಿದ್ದರೆನ್ನುವುದು, ಅವರಿಗೆ ಎಳ್ಳಷ್ಟೂ ರುಚಿಸಲಿಲ್ಲ. ರಾಜಪುರೋಹಿತರಾದರೂ, ಈ ಶಸ್ತ್ರ ಕ್ರಿಯೆಯನ್ನು ಕ್ಲೋರೋಫಾರ್ಮ ಕೊಟ್ಟೇ ನಡಸಿದರು. 'ಶ್ರೀಮಾನ್ ಟಿಳಕರು ಗುರ್ಲಹೊಸೂರಿನಲ್ಲಿ ಭಾಷಣ ಮಾಡುತ್ತ ನಮ್ಮ ಪೂರ್ವಜರಿಗೆ ಕನ್ನಡ ಬರುತ್ತಿತ್ತು. ಸಂತ ಜ್ಞಾನೇಶ್ವರನಿಗೂ ಕನ್ನಡವು ಚೆನ್ನಾಗಿ ತಿಳಿಯುತ್ತಿತ್ತು ಎಂದು ಹೇಳಿದರು' ಎಂಬ ಧಾಟಿಯಲ್ಲಿ ತಮ್ಮ ನಿಶಿತ ವಿಚಾರಗಳನ್ನು ಒಂದೊಂದಾಗಿ ಹೊರಗೆಡವಿದರು.

ಈ ಕ್ರಾಂತಿಕಾರೀ ಲೇಖನಾವಳಿಯು ಇಡೀ ಮಹಾರಾಷ್ಟ್ರದಲ್ಲಿ ಕೋಲಾಹಲವನ್ನೆಬ್ಬಿಸಿತು. ಆದರೆ ಲೇಖಕರ ವಿರುದ್ಧ ಬರೆನೊಂದ ನುಡಿಗಳೇ ಬಂದುವಲ್ಲದೆ, ಖಂಡತುಂಡವಾದ, ಸಪ್ರಮಾಣವಾದ ವಿರೋಧವು ವ್ಯಕ್ತವಾಗಲಿಲ್ಲವೆಂಬುದು ಮಹತ್ವದ ಮಾತಾಗಿದೆ.

ಕನ್ನಡಿಗರಲ್ಲಿಯೂ ಅದು ಉತ್ಸಾಹವನ್ನು ತಂದಿತು. ಅಭಂಗಗಳ ಪಾರಾಯಣ ಮಾಡುವಂಥ ಒಬ್ಬ ವ್ಯಕ್ತಿ ಛತ್ರೆ ಎಂಬವರು ಅದೇ ಪತ್ರಿಕೆಗೆ ಒಂದು ಪತ್ರವನ್ನು ಬರೆದು, ಏಕನಾಥನ ಅಭಂಗಗಳಲ್ಲಿ 'ವಿಠ್ಠಲ ಕಾನಡೀ' ಯಾವ ರೀತಿಯಾಗಿ ಬಂದಿದೆ, ಎಂಬುದನ್ನು ತೋರಿಸಿಕೊಟ್ಟರು. ಶ್ರೀ. ರಾಜಪುರೋಹಿತರ ಹೆಸರು ಅಖಿಲ ಕರ್ನಾಟಕದ ಮಾತಾಯಿತು. ಮುಂದಣ ಸಂಶೋಧನೆಗೆ ಪ್ರೋತ್ಸಾಹವನ್ನು ಕೊಟ್ಟಿತು.

ಆರ್ಯ ಧರ್ಮಧತ್ತ ಅವರ ಅಭ್ಯಾಸ ಸಾಹಿಸಿ ತಿರುಗಿತ್ತು ಎಂದು ಹೇಳಿದೆನಷ್ಟೆ. ಸಂಸ್ಕೃತದ ವಿಶೇಷ ವ್ಯಾಸಂಗವಿಲ್ಲದೆ ಇದು ಪರಿಪೂರ್ಣವಾಗಲಾರದು ಎಂದು ಕಂಡುಬಂದಿತು. ಆ ಕಾರಣ, ತಾವಾಗಿ ಕಾಶಿಗೆ ಹೋಗಿ, ಒಂದೂವರೆ ವರ್ಷ ಕಾಲ ಅಲ್ಲಿ ಧರ್ಮಶಾಸ್ತ್ರ, ಮೀಮಾಂಸೆ, ವ್ಯಾಕರಣಗಳನ್ನು ಅಭ್ಯಸಿಸಿದರು. ಬಡೋದೆಯ ಗಾಯಕವಾಡರ ಪ್ರಾಚ್ಯ ಗ್ರಂಥಾಲಯದ ಖ್ಯಾತಿಯನ್ನೂ ಕೇಳಿದ್ದರು. ಅಲ್ಲಿಯೂ ೨-೩ ತಿಂಗಳು ಕಾಲವಾಸವಾಗಿದ್ದು ೧೯೧೪ ರಲ್ಲಿ ಊರಿಗೆ ಮರಳಿದರು. ಇದಿಷ್ಟೂ ವ್ಯಾಸಂಗವು, ಅವರ ಮುಂದಿನ ಸಂಶೋಧನ ಮಾರ್ಗದಲ್ಲಿ ಅಕ್ಷಯವಾದ ದಾರಿಯ ಬುತ್ತಿಯಾಗಿತ್ತು.

# ಸಂನ್ಯಾಸ ಮತ್ತು ಸಂಸಾರ

ರಾಜಪುರೋಹಿತರಿಗೆ ೨೭ರ ತುಂಬು ವಯಸ್ಸು ಆವಾಗ. ಜೀವನ ಮುಂದಿನ ಮಾರ್ಗವನ್ನು ನಿರ್ಧರಿಸಿಕೊಂಡಿರಲಿಲ್ಲ. ಮೊದಲೇ ಸಾತ್ವಿಕ ಚೇತ ರಾದ ಅವರನ್ನು, ಆಗಡಿಯ ಶೇಷಾಚಲ ಮಠದ ವಾತಾವರಣವೂ, ವಿವೇಕ ನಂದ ಮುಂತಾದವರ ಬೋಧವೂ ಉತ್ತರ ಹಿಂದುಸ್ತಾನದ ಈ ಯಾತ್ರೆಯೂ ಅವರನ್ನು ಸಂನ್ಯಾಸದತ್ತ ಎಳೆಯತೊಡಗಿದವು! ಜೀವನಕ್ಕೆ ಯಾವ ಧ್ಯೇ ವನ್ನಿಟ್ಟುಕೊಳ್ಳಬೇಕು, ಧ್ಯೇಯವು ನಿಶ್ಚಿತವಾದಮೇಲೆ, 'ಸಂನ್ಯಾಸಾಶ್ರಮ ಸಂಸಾರ ಗ್ರಹಣ' ಇವುಗಳಲ್ಲಿ ಯಾವುದರಿಂದ ಧ್ಯೇಯಸಾಧನೆ ಸುಲ ವಾದೀತು ಎಂದು ಅವರು ತೊಳಲಾಟದಲ್ಲಿ ಬಿದ್ದಿದ್ದರು.

ಆಗಿನಿಂದಲೆ ಅವರು ತಮ್ಮ ದಿನಚರಿಯನ್ನು ಬರೆಯಲು ಆರಂಭಿಸಿದ ಪತ್ರಿಕಾ ಕಾರ್ಯ, ಇತಿಹಾಸ ಸಂಶೋಧನ, ಕರ್ನಾಟಕ ಏಕೀಕರಣ, ಭಾ ಸ್ವಾತಂತ್ರ್ಯ, ಧಾರ್ಮಿಕ ಕಾರ್ಯ ಇತ್ಯಾದಿ ಹಲವಾರು ಆದರ್ಶಗಳು ಕೈ ಮಾ ಕರೆಯುತ್ತಿದ್ದವು. ಸ್ವಭಾವತಃ ಭಾವುಕರಾದುದರಿಂದಲೂ, ಶಾಕ್ತ ಪಂ ಕಡೆಗೆ ಒಲವಿದ್ದುದರಿಂದಲೂ, ಮಾರ್ಗದರ್ಶನಕ್ಕಾಗಿ ಅವರು 'ಜಗಜ್ಜನನಿ ಪಾದಾರವಿಂದದಲ್ಲಿ ತಮ್ಮ ವಿಚಾರಗಳನ್ನು ಅರ್ಪಿಸಿ ದೈವಿಕ ಪ್ರೇರಣೆಗ ಕಾಯತೊಡಗಿದರು. ಅವರ ಆಗಿನ ದಿನಚರಿಯ ಪುಟಗಳಲ್ಲೆಲ್ಲ ಈ ತೊ ಲಾಟವು ಎದ್ದು ಕಾಣುವಂತಿದೆ.

ಕೊನೆಗೊಮ್ಮೆ ಸಂಶೋಧನದಲ್ಲಿ ತೊಡಗಬೇಕು, ಅದಕ್ಕಾಗಿ ಗೃ ಧರ್ಮವನ್ನು ಪಾಲಿಸಿಯೂ ತಮ್ಮ ಜೀವನ ಧ್ಯೇಯವನ್ನು ಮುಂದುವರಿಸು ಸಾಧ್ಯ, ಅದೇ ಸಕ್ರಿಯ ಧ್ಯೇಯವಾದೀತು ಎಂದು ನಿರ್ಧರಿಸಿಕೊಂಡರು. ವಿಚಾರ ಹೊಳೆದ ದಿನ 'ನನಗೆ ಜಗಜ್ಜನನಿಯ ಕೃಪೆ ದೊರೆಯಿತು' ಎ ಸಂತೋಷಪಟ್ಟಿದ್ದಾರೆ. ಹೀಗೆ ಕರ್ತವ್ಯದಲ್ಲಿ ಮತ್ತು ನಿಷ್ಕಳವಾದ ಕ ದೃಷ್ಟಿಯಲ್ಲಿ ಆನಂದಪಡುವವರಾದ್ದರಿಂದ, ಅವರಿಗೆ 'ಕರ್ತವ್ಯಾನಂದ' ಎ ಉಪನಾಮವು ತಾನಾಗಿಯೆ ಸ್ಫುರಿಸಿತು.

ಕರ್ನಾಟಕ ಇತಿಹಾಸ ಸಂಶೋಧನ ಮಂಡಳದ ಸ್ಥಾಪನೆಯೂ ಪುರೋಹಿತರ ಮದುವೆಯೂ, ಏಕ ಕಾಲಕ್ಕೆ (೧೯೧೪) ನಡೆದುವೆಂ ಗಮನಿಸತಕ್ಕ ಸಂಗತಿಯಾಗಿದೆ. ರಾಜಪುರೋಹಿತರು ಮಂಡಳದ ಸಂಸ್ಥಾ

ರಲಿಲ್ಲಬ್ಬರು. ಈ ಮಂಡಳದ ಸ್ಥಾಪನೆಯು ಅವರ ಧ್ಯೇಯ ಸಾಧನೆಯ ನಾಂದಿಯಾಗಿದ್ದಿತು. ಗೃಹಸ್ಥಾಶ್ರಮವು ಅವರ ಜೀವನ ಇನ್ನೊಂದು ಘಟ್ಟ ವಾಗಿದ್ದಿತು.

ರಾಜಪುರೋಹಿತರ ಪತ್ನಿ ಶಿವಮೊಗ್ಗಾ ಜಿಲ್ಲೆಯ ಸೊರಬ ತಾಲೂಕಿನ ನೆಗವಾಡಿ ಗ್ರಾಮದ ಶ್ಯಾನುಭೋಗರ ಮಗಳು. ಆಕೆ ಓದು-ಬರೆಹ ಕಲಿತವ ರಲ್ಲವಾದರೂ ರಾಜಪುರೋಹಿತರಿಗೆ ಆ ಮನೆತನದ ಸಂಬಂಧವು ಹಿತವನ್ನುಂಟು ಮಾಡಿದ್ದಿತು. ಇನ್ನೂ ತಮ್ಮದೆನ್ನುವ ಮನೆ, ಊರು ನಿಶ್ಚಿತವಾಗದಿದ್ದಾಗ ಅವರು ನೆಗವಾಡಿಯಲ್ಲಿಯೆ ೭-೮ ವರ್ಷ ನೆಲೆ ನಿಂತರು. ಮುಂದೆ ಆ ಗ್ರಾಮದ ಶ್ಯಾನುಭೋಗರಾದರು.

ನೆಗವಾಡಿಯಲ್ಲಿಯ ಒಂದು ವಿಶೇಷ ಸಂದರ್ಭವನ್ನು ಇಲ್ಲಿ ಹೇಳಬಹು ದಾಗಿದೆ. ಒಮ್ಮೆ ಇವರ ಊರಿಗೆ ಸೊರಬ ತಾಲೂಕಿನ ವಿದ್ಯಾಧಿಕಾರಿಯು ಬಂದನು. ಒಂದು ಸಣ್ಣ ಸಭೆ ನೆರವೇರಿತು. ಆ ಸಭೆಯಲ್ಲಿ ಶ್ರೀ. ರಾಜ ಪುರೋಹಿತರು, ಪ್ರಾಸಂಗಿಕವಾಗಿ ವಿವೇಕಾನಂದರ ಧರ್ಮಬೋಧವನ್ನು ಕುರಿತು ಚಿಕ್ಕ ಭಾಷಣ ಮಾಡಿದರು. ಆ ಅಧಿಕಾರಿಗೆ ಇವರ ಭಾಷಣವು, ಇಷ್ಟೊಂದು ಮೆಚ್ಚಿಕೆಯಾಯಿತಲ್ಲ, ಕೂಡಲೇ ಮೇಲಿನವರಿಗೆ ಪತ್ರ ಬರೆದು, ಅವರನ್ನು ಯಾವದೊಂದು ರೀತಿಯಲ್ಲಿ ವಿದ್ಯಾಖಾತೆಯಲ್ಲಿ ಸೇರಿಸಿಕೊಳ್ಳಬೇಕೆಂದು ಸೂಚಿಸಿ ದನು. ಅದು ಸರ್ ಎಂ. ವಿಶ್ವೇಶ್ವರಯ್ಯನವರು ದಿವಾನರಿದ್ದ ಕಾಲ. ಗ್ರಾಮಗಳ ಸಾಮಾಜಿಕ ಸುಧಾರಣೆಗಾಗಿ, ಅವರು ಏನೆಲ್ಲ ಯೋಜನೆಗಳನ್ನು ರೂಪಿಸಿದ್ದರು. ಆದರನ್ವಯ, ಹಳ್ಳಿಹಳ್ಳಿಗೆ ಪ್ರಚಾರ ಮಾಡಲಿಕ್ಕೆಂದು ಶ್ರೀ. ರಾಜಪುರೋಹಿತ ರನ್ನು ಸಂಚಾರೀ ಭಾಷಣಕಾರ ( Itinerate lecturer ) ನನ್ನಾಗಿ ನೇಮಿಸಲಾಯಿತು.

ಆದರೆ ನೆಗವಾಡಿಯ ಜೀವನ ಅವರಿಗೆ ಬಹಳ ದಿನ ಹಿಡಿಸಲಿಲ್ಲ. 'ಶ್ವಶುರ ಗೃಹವಾಸ ನರಕಮಿತ್ಯರ್ಥ್ಯಂ' ಎಂಬ ಪರಿಸ್ಥಿತಿ ಇರದಿದ್ದರೂ, ತಮ್ಮದೆನ್ನುವ ಮನೆ ಇರದಿದ್ದಾಗ, ತಮ್ಮ ಸಂಶೋಧನ ಕಾರ್ಯವು ನೆನೆಗುದಿಗೆ ಬೀಳುತ್ತ ನಡೆದಾಗ ಅದು ಹೇಗೆ ಸರಿ ಬಂದೀತು ? ನೆಗವಾಡಿಯಲ್ಲಿ ಎಲ್ಲ ಅನುಕೂಲತೆ ಗಳಿದ್ದರೂ, 'ಸ್ವಂತ ಅಲ್ಲ, ಅದ್ದರಿಂದ ಅಭಾವ. ಅಗಡಿಯಲ್ಲಿ ಸ್ವಂತ, ಅದ್ದ ರಿಂದ ಎಲ್ಲವೂ ಉಂಟು.' ಎಂಬುದಾಗಿ ತಮ್ಮ ೩೦-೪-೧೯೧೫ ರ ದಿನಚರಿ ಯಲ್ಲಿ ಬರೆದಿಟ್ಟಿದ್ದಾರೆ.

ನೆಗವಾಡಿಯನ್ನು ಒನ್ಮೆ ಬಿಡಬೇಕೆಂದು ಗೊತ್ತು ಮಾಡಿದಮೇಲೆ, ಅಗಡಿಗೆ ಹೋಗಿ ನೆಲೆನಿಲ್ಲಬೇಕೇ, ಏನು ಧಾರವಾಡಕ್ಕೆಯೆ ಎಂದು ಹೆಚ್ಚು ಯೋಚಿಸದೆ, ಸಾಮಾಜಿಕ ಜಾಗೃತಿಯು ನೆಲೆವೀಡಾಗಿ, ಸಂಸ್ಕೃತಿಯ ಹಬ್ಬುಗೆಗೆ ಅವಕಾಶವನ್ನೀಯುವ ಧಾರವಾಡವನ್ನೆ ಅವರು ಆರಿಸಿದರು. ಪ್ರಪಂಚದ ಮೊದಲನೇ ಮಹಾಯುದ್ಧವು ಅದೇ ಕೊನೆಗೊಂಡಿತ್ತು. ಧಾರವಾಡದಲ್ಲಿ ಇವರ ಪ್ರಪಂಚವು ಮೊದಲಾಯಿತು. ಕೈಹಿಡಿದ ಹೆಂಡತಿಯೊಡನೆ, ಕೈಗೊಂಡಿದ್ದ ಕರ್ತವ್ಯಕ್ಕೆ ಅನುವಾದರು.

## ಶ್ರೀಸುರೇಶ್ವರಾಚಾರ್ಯರು

ಶೃಂಗೇರಿ ಮಠದ ಆದ್ಯ ಗುರುಗಳಾದ ಶ್ರೀ. ಸುರೇಶ್ವರಾಚಾರ್ಯರ ವ್ಯಕ್ತಿತ್ವವು ರಾಜಪುರೋಹಿತರನ್ನು ಯಾವ ಸಂದರ್ಭದಲ್ಲಿ ಆಕರ್ಷಿಸಿತೆಂಬುದು ತಿಳಿದುಬಂದಿಲ್ಲ. ೧೯೧೨ ರಷ್ಟು ಹಿಂದೆಯೆ ಇವರ ಗ್ರಂಥಗಳನ್ನು ಅಭ್ಯಾಸ ಮಾಡಿದ್ದರು. ಕೇಸರಿಯ ಲೇಖನಮಾಲೆಯಲ್ಲಿಯೆ, ನರ್ಮದೆಯ ಪರ್ಯಂತ ಕರ್ನಾಟಕವು ಹಬ್ಬಿತ್ತು ಎಂದು ತೋರಿಸುವ ಕಾಲದಲ್ಲಿ ಸುರೇಶ್ವರಾಚಾರ್ಯರ ವಾಸಸ್ಥಾನದ ವಿಚಾರವಾಗಿ ಚರ್ಚಿಸಿದ್ದಾರೆ. ಅದೇ ಕಾಲಕ್ಕೆ 'ಆಚಾರ್ಯ' ಎಂಬ ಮರಾಠೀ ಪತ್ರಿಕೆಯಲ್ಲಿ ಪ್ರತ್ಯೇಕ ಲೇಖನವನ್ನೂ ಬರೆದಿದ್ದರು.

ಸುರೇಶ್ವರಾಚಾರ್ಯರ ಚರಿತ್ರೆಯನ್ನು ಧಾರ್ಮಿಕ ಹಾಗೂ ಸಾಂಪ್ರದಾಯಿಕ ರೀತಿಯಲ್ಲಿ ಬರೆಯುವ ಉದ್ದೇಶವನ್ನು ರಾಜಪುರೋಹಿತರು ಇಟ್ಟುಕೊಂಡಿರ ಲಿಲ್ಲ. ಇದುವರೆಗೆ ಗೊತ್ತಾಗದಿದ್ದ ಸತ್ಯ ಸಂಗತಿಗಳನ್ನು ಕಂಡುಹಿಡಿದು ಸಂಶೋಧನಾತ್ಮಕವಾಗಿ ಬರೆಯುವುದೇ ಅವರ ಉದ್ದೇಶವಾಗಿದ್ದಿತು. ಅವರ ನಿಜವಾದ ಸಂಶೋಧನದ ಕಾರ್ಯ ಈ ಕೃತಿಯಿಂದಲೇ ಪ್ರಾರಂಭವಾಯಿತೆನ್ನ ಬೇಕು. 'ಸಂಶೋಧನೆಯೂ ಒಂದು ರಚನಾತ್ಮಕ ಕಲೆ' ಎಂಬುದು, ಅವರ ಆಗಿನ ದಿನಚರಿಗಳನ್ನು ಓದಿದವರಿಗೆ ಥಟ್ಟನೆ ಮನವರಿಕೆಯಾಗುವಂತಿದೆ.

ಮೊದಲು ಸದ್ಬೋಧ ಚಂದ್ರಿಕೆಯಲ್ಲಿ ಬಿಡಿ ಲೇಖನಗಳ ರೂಪದಲ್ಲಿ ಪ್ರಕಟನಮಾಡಿ ಮುಂದೆ ೧೯೨೨ ರಲ್ಲಿ ಶ್ರೀ. ಭಿ. ಪ. ಕಾಳೆಯವರು ಈ ಪುಸ್ತಕ ವನ್ನು ಪ್ರಕಟಿಸಿದರು. ಪ್ರಕಟವಾದೊಡನೆಯೆ ಜನತೆಯ ಇನ್ನೊಂದು ವರ್ಗದ ಗಮನವು ರಾಜಪುರೋಹಿತರತ್ತ ತಿರುಗಿತು. ಸುರೇಶ್ವರಾಚಾರ್ಯರ ಮೇಲಿನ

ಅಭ್ಯಾಸವು ಅವರ ಸ್ವಂತ ಜೀವನದಲ್ಲಿಯೂ ಪರಿಣಾಮ ಮಾಡಿತು. ಅದರಲ್ಲಿ ತಮ್ಮ ಬೌದ್ಧಿಕ ಶಕ್ತಿಯನ್ನೆಲ್ಲ ವಿನಿಯೋಗಿಸಿದ್ದರು. ಆಗಿನ ಮಟ್ಟಿಗೆ ಆಚಾರ್ಯರು ಅವರ ಆರಾಧ್ಯ ದೇವತೆಗಳಾಗಿದ್ದರೆಂದರೂ ಸರಿ. ಮರುವರ್ಷ ೧೯೨೪ರಲ್ಲಿ ತಮಗೆ ಗಂಡುಮಗು ಹುಟ್ಟಿದಾಗ, 'ಇಂದು ಶ್ರೀ. ಸುರೇಶ್ವರಾಚಾರ್ಯರು ಅವತರಿಸಿದರು' ಎಂದು ತಿಳಿದು ಮಗುವಿಗೆ ಸುರೇಶ್ವರನೆಂದೇ ನಾಮಕರಣ ಮಾಡಿದರು.

ಪುಸ್ತಕವು ಪ್ರಕಟವಾದ ಮರುವರ್ಷದಿಂದಲೇ, ಸುರೇಶ್ವರಾಚಾರ್ಯರ ಪುಣ್ಯತಿಥಿಯಾಚರಣೆಯ ಸಾಮಾಜಿಕ ಉತ್ಸವವನ್ನು ರೂಢಿಸಿದರು. ಉಣಕಲ್ಲಿನ ಶಂಕರರಾವ ಕುಲಕರ್ಣಿಯೆಂಬವರಿಂದ ಕೀರ್ತನೆಯನ್ನು ಬರೆಯಿಸಿದರು. ಆಚಾರ್ಯರ ಚಿತ್ರವನ್ನು ಮುದ್ರಿಸಿ ಪ್ರಕಟಿಸಿದರು. ತಾವೇ ಉತ್ಸವ ಸಮಿತಿಯ ಕಾರ್ಯದರ್ಶಿಯಾಗಿ, ಒಂದೊಂದು ಊರಲ್ಲಿ ಇಂಥ ಉತ್ಸವಗಳನ್ನು ನೆರವೇರಿಸಿದರು. ಇತ್ತ ಶೃಂಗೇರಿ ಮಠಾಧೀಶ್ವರರು ಅವರನ್ನು ಕರೆಯಿಸಿಕೊಂಡು ಸನ್ಮಾನ ಮಾಡಿದರು. ಧಾರವಾಡದ ಸನಾತನ ಹಾಗೂ ಪಂಡಿತ ವರ್ಗವು ಇವರನ್ನು ಆದರದಿಂದ ಕಾಣತೊಡಗಿತು.

ಆದರೆ ಭಾಗವತ ಸಂಪ್ರದಾಯದ ರಾಜಪುರೋಹಿತರು ಸ್ಮಾರ್ತ ಆಚಾರ್ಯರ ಬಗ್ಗೆ ಪುಸ್ತಕ ಬರೆದದ್ದಲ್ಲದೆ, ಅದರ ಪ್ರಚಾರಕ್ಕಾಗಿಯೂ ನಿಲ್ಲುವುದೆ? ಧಾರವಾಡದ 'ವಿಜಯ' ವೆಂಬ ಆಗಿನ ಪತ್ರಿಕೆಯಲ್ಲಿಯೂ, ಇತರ ಕಡೆಗಳಲ್ಲಿಯೂ ಟೀಕೆಗಳು ಬಂದುವು. ರಾಜಪುರೋಹಿತರು ಸಾರ್ವಜನಿಕವಾಗಿ ಅವಕ್ಕೆ ಉತ್ತರ ಕೊಡುತ್ತ— "ಬರಿ ಸುರೇಶ್ವರಾಚಾರ್ಯರೇಕೆ, ಮಧ್ವಾಚಾರ್ಯ, ಜಯತೀರ್ಥಾಚಾರ್ಯರ ಮೇಲೂ ಲೇಖನ ಬರೆಯಲು ತೊಡಗಿದ್ದೇನೆ. ಮುಂದೆ ಶ್ರೀ ವೈಷ್ಣವ ಮತದ ವೇದಾಂತ ದೇಶಿಕಾಚಾರ್ಯರ ಚರಿತ್ರೆಯನ್ನೂ ಬರೆಯಬೇಕೆಂದು ವಿಚಾರವನ್ನಿಟ್ಟುಕೊಂಡಿದ್ದೇನೆ. ಆಗ ಜನ ನನ್ನನ್ನು 'ನಾರಾಯಣಯ್ಯಂಗಾರ್' ಎಂದು ಕರೆಯುವ ಹೂಲಿಯನ್ನೆಬ್ಬಿಸುವರೋ?" ಎಂದು ಕೇಳಿದ್ದಾರೆ.

## ಇತಿಹಾಸ ಸಂಶೋಧನ ಮಂಡಳ

ಶ್ರೀ. ರಾಜಪುರೋಹಿತರು ಧಾರವಾಡದಲ್ಲಿ ನೆಲೆನಿಲ್ಲಲು ಮನಸ್ಸು ಮಾಡಿದುದು, ಅಲ್ಲಿಯ 'ಕರ್ನಾಟಕ ಇತಿಹಾಸ ಸಂಶೋಧನ ಮಂಡಳ' ಕ್ಕಾ

ಗಿಯೇ ಎಂದು ಹೇಳಬಹುದು. ಇಷ್ಟು ದಿನ ವ್ಯಕ್ತಿಗತವಾಗಿದ್ದ ಅವರ ಸಂಶೋಧನವು ಇನ್ನು ಮುಂದೆ ಸಂಸ್ಥಾರೂಪಿಯಾಯಿತು. ಈ ಸಂಸ್ಥೆಯ ಮೂಲಕ ಅವರು ಮಾಡಿದ ಕಾರ್ಯವು ಅವ್ಯಾಹತವಾದುದು. ಈ ಕಾರ್ಯವನ್ನು ಮೂರು ಬಗೆಯಾಗಿ ವಿಭಾಗಿಸಬಹುದು.

ಸಂಶೋಧನದಂಥ ವಿಷಯವು ಸಮಸ್ತರಿಗೂ ಹಿಡಿಸುವಂತಹದಲ್ಲವಷ್ಟೆ. ಅದಕ್ಕಾಗಿ ಆಸ್ಥೆಯುಳ್ಳವರ ಒಂದು 'ಅಭ್ಯಾಸ ಮಂಡಲ' ವನ್ನು ಹುಟ್ಟಿ ಹಾಕಿ, ಅಲ್ಲಿ ಲೇಖನಗಳನ್ನು ಓದಬೇಕು, ಚರ್ಚಿಸಬೇಕು ಎಂದು ಲೆಕ್ಕ ಹಾಕಿ ಕೊಂಡರು. ಈ ಅಭ್ಯಾಸ ಮಂಡಲವು ೮–೧೦ ವರ್ಷಗಳ ಕಾಲ ಸಾಗಿದ್ದಿತು. ಅದರಲ್ಲಿ ಹೆಚ್ಚು ಲೇಖನಗಳನ್ನು ಓದಿದವರು ಶ್ರೀ. ರಾಜಪುರೋಹಿತರೇ.

ಮಂಡಳದ ವತಿಯಿಂದ ಒಂದು ತ್ರೈಮಾಸಿಕವನ್ನು ಹೊರಡಿಸುವಲ್ಲಿ ರಾಜಪುರೋಹಿತರದು ವಿಶೇಷ ಅಂಗವಿದ್ದಿತು. ೧೯೩೨ ರಲ್ಲಿ 'ಪ್ರಾಚೀನ ಕರ್ನಾಟಕ' ಪತ್ರಿಕೆ ಆರಂಭವಾಯಿತು. ಕಾರಣಾಂತರದಿಂದ ಅದು ನಿಂತು ಹೋಗಿದ್ದುದು, ಈಗ ಮತ್ತೆ ಅದರ ಆರಂಭವಾಗಿದೆ.

ಆದರೆ ಅವರ ಮುಖ್ಯ ಕಾರ್ಯವೆಂದರೆ, ಮಂಡಲದ ಪ್ರಚಾರಕರಾಗಿ ಅಖಿಲ ಕರ್ನಾಟಕ ಸಂಚಾರವನ್ನು ಕೈಕೊಂಡದ್ದು. ಇತಿಹಾಸ ಸಂಶೋಧನೆ ಯಲ್ಲಿ ಆಸ್ಥೆಯಿದ್ದವರನ್ನು ಸದಸ್ಯರನ್ನಾಗಿ ಮಾಡಿದರು. ಜೊತೆಗೆ ಪ್ರಾಚೀನ ಅವಶೇಷಗಳೆಂದಿರುವ ನಾಣ್ಯ, ತಾಡವಾಲೆ ಗ್ರಂಥಗಳು, ಕಲ್ಬರೆಹಗಳ ನಕಲು ಇವನ್ನು ಕಲೆಹಾಕಿದರು. ಎಲ್ಲವನ್ನೂ ಮಂಡಳಕ್ಕೆ ನೀಡಿದರು. ಇಂದು ಸಂಶೋಧನ ಮಂಡಳದ ವಸ್ತುಸಂಗ್ರಹಾಲಯದಲ್ಲಿರುವ ಹೆಚ್ಚಿನ ಸರಕುಗಳು, ರಾಜಪುರೋಹಿತರು ಸಂಗ್ರಹಿಸಿದವುಗಳೇ ಆಗಿವೆ.

ಈ ಕಾರ್ಯದಲ್ಲಿ ಅವರ ಸ್ವಂತದ ಆಸೆಯೂ ಒಂದಿದ್ದಿತು. ರೈಸ, ಕೀಲ-ಹಾರ್ನ, ಬಾರ್ನೆಟ್ ಮುಂತಾದವರು ಶೋಧಿಸಿ ತೆಗೆದ ಶಿಲಾಶಾಸನಗಳ ಸದ್ಯಃ ಸ್ಥಿತಿಯನ್ನೂ, ಸತ್ಯತೆಯನ್ನೂ, ನಿಜಸ್ವರೂಪವನ್ನೂ ಕಂಡುಕೊಳ್ಳುವುದು ಅವರ ಅಪೇಕ್ಷೆಯಾಗಿದ್ದಿತು. ೬೦–೭೦ ವರ್ಷಗಳ ಈ ನಡುವಿನ ಅಂತರದಲ್ಲಿ, ಎಷ್ಟೋ ಶಾಸನಗಳ ಪತ್ತೆಯೇ ಇರಲಿಲ್ಲ.

ಪ್ರವಾಸ ಕೈಕೊಂಡ ಊರಿನಲ್ಲೆಲ್ಲ ರಾಜಪುರೋಹಿತರು ಭಾಷಣ ಮಾಡು ತ್ತಿದ್ದರು. ಭಾಷಣದ ವಿಷಯ— ಸಂಶೋಧನೆ, ಶಾಸನಗಳ ಮಹತ್ವ,

ವಿಜಯನಗರ ಸಾಮ್ರಾಜ್ಯ, ಪ್ರಾಚೀನ ಮಹಿಳೆಯರು, ಇತ್ಯಾದಿ. ಒಂದೆಡೆ ಇತಿಹಾಸವನ್ನು ಅರಿತುಕೊಳ್ಳುವುದರ ಅಗತ್ಯವನ್ನು ತಮ್ಮ ಶ್ರೋತೃಗಳ ಮೇಲೆ ಬಿಂಬಿಸುವಾಗ 'ನಮ್ಮ ಪೂರ್ವೇತಿಹಾಸ ನಮಗೆ ತಿಳಿದಿರದಿದ್ದರೆ ವೇಶ್ಯಾಪುತ್ರನಿಗೂ ನಮಗೂ ಏನೂ ಅಂತರವಿಲ್ಲ.' ಎಂದು ಹೇಳುತ್ತಿದ್ದರು! ಅವರಲ್ಲಿ ವಾಗ್ಮಿತೆ ಇತ್ತು ಎನ್ನುವುದಕ್ಕಿಂತಲೂ ವಿಷಯವಿತ್ತು. ಆ ವಿಷಯದಲ್ಲಿ ತಲ್ಲೀನತೆ ಹಾಗೂ ಶ್ರದ್ಧೆ ಇದ್ದಿತು. ಅದನ್ನು ನಾಲ್ಕು ಜನಕ್ಕೆ ತಿಳಿಸಿಕೊಡಬೇಕೆಂಬ ಉತ್ಕಂಠೆ ಇದ್ದ ಮೂಲಕ ಅವರು, ಎರಡೆರಡು ತಾಸುಗಳ ವರೆಗೆ ಆವೇಶಯುಕ್ತವಾಗಿ ಭಾಷಣ ಮಾಡಿದುದುಂಟು.

ಇವರ ಭಾಷಣದ ವೈಖರಿಯಿಂದಾಗಿಯೆ ಅನೇಕ ಜನರು ಸಭೆಯಲ್ಲಿಯೆ ಮಂಡಳದ ಸದಸ್ಯರಾಗಲು ಮುಂದೆ ಬಂದರು. ರಾಜಪುರೋಹಿತರು, ಇಂಥವರ ಹೆಸರುಗಳನ್ನು ಮೊದಲುಗೊಂಡು ದೊರೆತ ಪ್ರಾಚೀನ ಅವಶೇಷಗಳು, ಆ ಊರಿನ ಐತಿಹ್ಯ, ಐತಿಹಾಸಿಕ ಕುರುಹುಗಳು ಇವೆಲ್ಲವುಗಳ ವರದಿಗಳನ್ನು 'ಕ. ಇ. ಸಂಶೋಧನ ಮಂಡಳದ ಪ್ರಚಾರ ಕಾರ್ಯ' ಎಂಬ ಶೀರ್ಷಿಕೆಯಡಿಯಲ್ಲಿ, ಪತ್ರಿಕೆಗಳಲ್ಲಿ ಪ್ರಸಿದ್ಧಿಸಿದರು.

ಇತಿಹಾಸ ಸಂಶೋಧನ ಮಂಡಳದ ಪ್ರಚಾರಕರೆಂದು ತಿರುಗಾಟದಲ್ಲಿದ್ದ ಕಾಲದಲ್ಲಿಯೆ ರಕ್ಕಸತಂಗಡಗಿ ರಣಭೂಮಿಯ ಶೋಧವಾದದ್ದು. ಇದಕ್ಕೂ ಮುಂಚೆ ವಿಜಯನಗರದ ಅವಸಾನಕ್ಕೆ ಕಾರಣವಾದ ಯುದ್ಧವು ತಾಳೀಕೋಟೆಯ ಯುದ್ಧವೆಂದು ತಪ್ಪಾಗಿ ಪ್ರಚಲಿತವಿದ್ದಿತು. ವಿಜಯನಗರದ ರಾಮರಾಯನ ಆಸ್ಥಾನದಲ್ಲಿ, ಸಮಕಾಲೀನನಾಗಿ ಇದ್ದ ಹರಿಕಾರೆ ಎಂಬವನ ಬಖೈರನ್ನು ನೋಡಿದಮೇಲೆ, ಈ ವಿಷಯದಲ್ಲಿ ಸಂಶಯ ಬಂದಿತ್ತು. ಎಂತಲೇ ರಾಜಪುರೋಹಿತರು ಅದರಲ್ಲಿ ಬಂದಿರುವ ಗ್ರಾಮಗಳಿಗೆ ಹೋದರು. ಹೀಗೆ ಸುತ್ತುತ್ತಿರುವಾಗ ತಂಗಡಗಿಯ ದಕ್ಷಿಣ ಭಾಗದಲ್ಲಿ, ಮಡಿದವರನ್ನು ದಹನ ಮಾಡಿದ್ದುದರ ಗುರುತಾಗಿ ಸುಮಾರು ೩ ಎಕರೆಯಷ್ಟು ಬೂದಿಯ ರಾಶಿಯು ಹರಡಿದ್ದುದನ್ನು ಕಂಡರು. ಆ ರಾಶಿಯು ಮೊದಲು ೧॥ ಆಳು ಎತ್ತರವಿದ್ದಿತಾಗಿಯೂ ಜನರು ತಮ್ಮ ಕೆಲಸಗಳಿಗೆ ಅದನ್ನು ಕಡಿದು ಉಪಯೋಗಿಸಿದ್ದಾರಾಗಿಯೂ ವೃದ್ಧರಾದ ಹಳ್ಳಿಗರಿಂದ ಅರಿತುಕೊಂಡರು.

ರಾಜಪುರೋಹಿತರು, ಗ್ರಾಮಸ್ಥರ ಸಹಾಯದಿಂದ ಕೆಲವು ಆಳುಗಳನ್ನು ಕೆಲಸಕ್ಕೆ ಹಿಡಿದು, ದೇವತಾ ಪ್ರಾರ್ಥನೆ ಮಾಡಿಸಿ, ಅಗಿಸಲಿಕ್ಕೆ ಆರಂಭಿಸಿದರು.

ಆಗ ಅವರಿಗೆ ಎಲುಬುಗಳು ದೊರೆತವು ! ವಿಜಾಪುರದ ಡಾ. ಬಕ್ಷಿಯವರೂ ಜೊತೆಗಿದ್ದರು. ಅವರು ಅವನ್ನು ಸೈನಿಕರ ಹಾಗೂ ಕುದುರೆಗಳ ಎಲುಬುಗಳೆಂದು ವಿವರಿಸಿದರು.

ವಿಜಾಪುರದ ಆದಿಲಶಹನು ರಾಮರಾಯನಿಗಾಗಿ ಕಟ್ಟಿಸಿದ್ದನೆಂದು ಹರಿಕಾರೆಯು ತನ್ನ ಬಖೈರಿನಲ್ಲಿ ಹೇಳಿದ್ದನು. ಅದನ್ನು ಹುಡುಕುತ್ತಿರುವಾಗ ಸ್ವಲ್ಪ ದೂರದಲ್ಲಿ ವಿಸ್ತಾರವಾದ ದೊಡ್ಡ ಕಟ್ಟೆಯನ್ನೂ, ಅದರ ಮೇಲಿನ ವೀರಗಲ್ಲನ್ನೂ ಕಂಡರು. ಇನ್ನೂ ಮುಂದೆ ನಾಲ್ವತ್ವಾಡ ಗ್ರಾಮದತ್ತ ಹೋದಾಗ ರಣಸ್ತಂಭಗಳು ನೋಡಲು ದೊರೆತವು. ಇವೇ ಮೊದಲಾದ ಪುರಾವೆಗಳನ್ನು ಪರಿಶೀಲಿಸಿದಮೇಲೆ, ರಕ್ಕಸತಂಗಡಗಿ-ನಾಲ್ವತ್ವಾಡಗಳ ಊರಿನ ನಡುವೆ ಘನಘೋರ ಯುದ್ಧವು ನಡೆಯಿತು; ಊರಿನ ಇನ್ನೊಂದು ಬದಿಗೆ ವೀರರಿಗೆ ಉಚಿತವಾದ ದಹನ ಕ್ರಿಯೆಯು ನಡೆಯಿತು ಎಂಬ ನಿರ್ವಿವಾದ ಸತ್ಯವು ಹೊರಹೊಮ್ಮಿತು.

ತಮ್ಮ ಎಣಿಕೆಯು ಈ ಪ್ರತ್ಯಕ್ಷ ಶೋಧದಿಂದ ಸತ್ಯ ಸಂಗತಿಯಾಗಿ ಪರಿಣಮಿಸಿದ್ದನ್ನು ಕಂಡು ರಾಜಪುರೋಹಿತರಿಗೆ ಆನಂದಾತಿರೇಕವಾಯಿತು. ಅವರ ಧೃಢ ನಿಶ್ಚಯದ ಕಾರ್ಯೋನ್ಮುಖತೆಯು, ಸ್ಥಳಿಕರನ್ನೂ, ಇತರತ್ರ ಜನರನ್ನೂ ಬೆರಗುಗೊಳಿಸಿತು.

ಈ ಶೋಧವಾದ ೨-೩ ತಿಂಗಳುಗಳಲ್ಲಿ ಭಾರತ ಇತಿಹಾಸ ಸಂಶೋಧನ ಮಂಡಳದ ಸಮ್ಮೇಲನ ಸೇರುವುದಿತ್ತು (೧೯೨೯). ಶ್ರೀ. ರಾಜಪುರೋಹಿತರು ದೀರ್ಘ ಲೇಖವನ್ನು ಬರೆದು ಅದನ್ನು ಸಮ್ಮೇಲನದಲ್ಲಿ ಓದಿದರು. ಇತ್ತ ‘ ಪ್ರಾಚೀನ ಕರ್ನಾಟಕ ’ದಲ್ಲಿಯೂ ಬರೆದರು. ತಮ್ಮ ಭಾಷಣ, ವರದಿಗಳಲ್ಲಿ ಈ ಬಗ್ಗೆ ಪ್ರಸ್ತಾಪ ಮಾಡಿದರು.

ಪಟವರ್ಧನ, ಕೇಳಕರ ಮೊದಲಾದ ಇತಿಹಾಸ ಪ್ರಭೃತಿಗಳು ವಿವರವಾಗಿ ಈ ಯುದ್ಧದ ಬಗ್ಗೆ ಮರಾಠಿಯಲ್ಲಿ ಬರೆದಿದ್ದ ಅಭಿಪ್ರಾಯಗಳು, ಈ ಶೋಧದಿಂದಾಗಿ ಬುಡಮೇಲಾದುವು. ಈ ನಿರೀಕ್ಷಣೆಗೆ ವಿಶೇಷ ಮಹತ್ವ ಬರಲಿಕ್ಕೆ ಇನ್ನೂ ಒಂದು ಕಾರಣವಿತ್ತು. ಯಾವ ಯುದ್ಧದಿಂದ ಸಮಗ್ರ ದಕ್ಷಿಣ ಹಿಂದುಸ್ತಾನದ ಇತಿಹಾಸದ ಸ್ವರೂಪವೇ ಬದಲಾಯಿತೋ ಅಂಥ ಯುದ್ಧ ನಡೆದಲ್ಲಿ, ಭಾರತ

ಇತಿಹಾಸ ಸಂಶೋಧನ ಮಂಡಳದ ಸಲಹೆಯ ಮೇರೆಗೆ, ಆಗಿನ ಬ್ರಿಟಿಶ ಸರಕಾರವು ಒಂದು ಸ್ಮಾರಕವನ್ನು ಕಟ್ಟಲು ನಿರ್ಧರಿಸಿತ್ತು. ಕಾರಣಾಂತರಗಳಿಂದ ಆಗಿನ ಕೇಂದ್ರ ಸರಕಾರವು ಬಿಟ್ಟುಕೊಟ್ಟರೂ, ಕನ್ನಡಿಗರಾದ ನಾವು ಅಂಥ ಸ್ಮಾರಕವೊಂದನ್ನು, ರಕ್ಕಸತಂಗಡಗಿಯ ಹತ್ತರ ಕಟ್ಟುವುದು ಅಗತ್ಯವಿದೆ.

## ಗ್ರಂಥ ರಚನೆ

ಈಗಾಗಲೇ ಕರ್ನಾಟಕದ ಬಗ್ಗೆ ಅನೇಕ ಐತಿಹಾಸಿಕ ಸಂಗತಿಗಳು ಬೆಳಕಿಗೆ ಬಂದಿದ್ದುವು. ಅಧಿಕೃತವಾದ ಒಂದು ಸಮಗ್ರ ಇತಿಹಾಸವನ್ನು ಬರೆಯಬೇಕೆಂದು ರಾಜಪುರೋಹಿತರ ಮನಸ್ಸಿನಲ್ಲಿ ಬಹುಕಾಲದಿಂದ ಇತ್ತು. ಆದರೆ ಒಬ್ಬರಿಂದ ತಂದ ಸಾಲವನ್ನು ಮುಟ್ಟಿಸುವುದಿದ್ದುದರಿಂದ, ಮಿತ್ರರೊಬ್ಬರು ಅವರಿಗೆ "ನೀವು ಸದ್ಯಕ್ಕೆ ಪಠ್ಯ ಪುಸ್ತಕದ ರೀತಿಯಲ್ಲಿ ಬರೆದರೆ ಒಳ್ಳೆಯದು" ಎಂದು ಸೂಚಿಸಿದರು. ರಾಜಪುರೋಹಿತರಿಗೆ ಒಪ್ಪಬೇಕಾಗಿ ಬಂದಿತು. ವ್ಯಾಪಕ ಇತಿಹಾಸವನ್ನು ನಂತರ ಬರೆದರಾಯಿತೆಂದು ಸಮಾಧಾನ ಮಾಡಿಕೊಂಡರು.

ಇಲ್ಲಿ ಅವರ ಮಾಸ್ತರಿಕೆಯ ಬುದ್ಧಿಯು ಕೆಲಸ ಮಾಡಿತು. ಮಕ್ಕಳಿಗೆ ಎಂದಿನಿಂದ ಇತಿಹಾಸದ ಅಭ್ಯಾಸವು ಆರಂಭವಾಗುವದೊ ಆ ವರ್ಗದ ವಿದ್ಯಾರ್ಥಿಗಳಿಗೆ ಅನುಕೂಲವಾಗಲೆಂದು, ಸುಲಭ ಶೈಲಿಯಲ್ಲಿ ಮನೋರಂಜಕವಾಗುವಂತೆ ಬರೆಯುವ ದೃಷ್ಟಿಯನ್ನಿಟ್ಟುಕೊಂಡರು. ನಕಾಶವನ್ನೂ ನಾಡಿನ ರಾಜಮನೆತನಗಳ ವಂಶಾವಳಿಯನ್ನೂ ತಾವೇ ಸಿದ್ಧಗೊಳಿಸಿದರು. ಹುಬ್ಬಳ್ಳಿಯ ಎ. ಆರ್. ಶಿವನಾಗಪ್ಪನವರಿಗೆ ಹಸ್ತಪ್ರತಿಯನ್ನು ಮಾರಿದರು. ಹೀಗೆ ೧೯೩೦ರಲ್ಲಿ 'ಕರ್ನಾಟಕದ ವರ್ಣನೆಯೂ ಇತಿಹಾಸವೂ' ಪ್ರಸಿದ್ಧವಾಯಿತು. ನಕ್ಷೆಗಳನ್ನೂ, ಚಿತ್ರಗಳನ್ನೂ ಸೇರಿಸಿ ಪುಸ್ತಕವು ಸುಂದರವೂ ಉಪಯುಕ್ತವೂ ಆಗುವಂತೆ ಅದರ ಪ್ರಕಾಶಕರು ಬಹಳಷ್ಟು ಹೆಣಗಿದರು.

ರಾಜಪುರೋಹಿತರು ಬರೆದಿದ್ದಾರೆಂದಮೇಲೆ, ವಿಷಯದ ಪ್ರಾಮಾಣ್ಯವನ್ನು ಶಂಕಿಸುವ ಪ್ರಮೇಯವೇ ಇರಲಿಲ್ಲ. ಕೂಡಲೇ ಅದು ಸತ್ಯವೆಂದು ಜನಪ್ರಿಯವಾಯಿತು. ಸುಮಾರು ೧೦ ವರ್ಷಗಳ ಕಾಲ ಇದೇ ಏಕೈಕವಾದ

ಪಠ್ಯ ಪುಸ್ತಕವಾಗಿ ಮೆರೆಯಿತು. ೭-೮ ಆವೃತ್ತಿಗಳು ಹೊರಟು ೨೫ ಸಾವಿರಕ್ಕೆ ಮೇಲ್ಪಟ್ಟ ಪ್ರತಿಗಳು ಮಾರಾಟವಾದುವು. ಮುಂದೆ ಹುಬ್ಬಳ್ಳಿಯ ಶ್ರೀ. ಬೇಡೇಕರ ಮತ್ತು ಶ್ರೀ. ಶಿಂದೆ ಎಂಬ ಮಾಸ್ತರರು ಅದನ್ನು ಮರಾಠಿಯಲ್ಲಿ ಭಾಷಾಂತರಿಸಿ, ಕರ್ನಾಟಕ ಇತಿಹಾಸವನ್ನು ಕಲಿಯಬೇಕಾದ ಕರ್ನಾಟಕಸ್ಥ ಮರಾಠೀ ಮಕ್ಕಳಿಗೆ ನೆರವಾದರು.

ಶ್ರೀ. ರಾಜಪುರೋಹಿತರ ಮುಂದಿನ ಪುಸ್ತಕವೆಂದರೆ, **'ಶ್ರೀ ಮನ್ಮಧ್ವಾಚಾರ್ಯ ಹಾಗೂ ಶ್ರೀ ಜಯತೀರ್ಥರ ಚರಿತ್ರೆಯು'.** ೧೯೧೮ ರಷ್ಟು ಹಿಂದೆಯೆ ಈ ಅಭ್ಯಾಸದಲ್ಲಿ ಅವರು ತೊಡಗಿದ್ದರು. ಅವರಿಬ್ಬರ ಗ್ರಂಥಗಳಲ್ಲಿ ಕಂಡುಬರುವ ಚಾರಿತ್ರಿಕ ಅಂಶಗಳನ್ನು ಪಂಡಿತರೊಡನೆ ಚರ್ಚಿಸಿದರು. ಅವರಿಬ್ಬರ ಜನ್ಮಸ್ಥಳ, ದೇಹವಿಟ್ಟ ಊರುಗಳಿಗೆ ಹಲವು ಬಾರಿ ಹೋಗಿಬಂದರು. ಬರೆಯುವುದಕ್ಕೆ ಪ್ರಾರಂಭ ಮಾಡಲು ೧೯೩೩ರ ವರೆಗೆ ಕಾಯಬೇಕಾಯಿತು. ಈ ಆಚಾರ್ಯದ್ವಯರ ಚರಿತ್ರೆಯನ್ನು ಒಂದೇ ಕಡೆಗೆ ತಂದು, ತುಲನಾತ್ಮಕ ಅಭ್ಯಾಸಕ್ಕೆ ಅಣಿ ಮಾಡಿಕೊಡುವುದು ಅಗತ್ಯವಾಗಿ ಕಂಡಿತು. ೧೯೩೮ ರಲ್ಲಿ ಹುಬ್ಬಳ್ಳಿಯ ಅವಧೂತ ಗ್ರಂಥಮಾಲೆಯುವರು ಇದನ್ನು ಪ್ರಕಟಿಸಿದ್ದಾರೆ. ತಮ್ಮ ಈ ಅಭ್ಯಾಸದ ನೆನಹಿಗಾಗಿ ತಮ್ಮ ಎರಡನೆಯ ಮಗನಿಗೆ 'ಮಧ್ವ'ನೆಂದೇ ಹೆಸರಿಟ್ಟರು.

ಈ ಗ್ರಂಥ ರಚನೆಯಲ್ಲಿಯೂ, ಸಂಶೋಧನೆಯೇ ಮುಖ್ಯ ಗುರಿಯಾಗಿದ್ದಿತಾದರೂ, ಕೆಲವು ಜನ ಅಪಾರ್ಥ ಮಾಡಿಕೊಂಡರು. ಸಾಕಷ್ಟು ಚರ್ಚೆ ಖಂಡನೆಗಳು ಮುಂದಣ ೨-೩ ವರ್ಷ ಕಾಲ ನಡೆದುವು. ಈ ವಿಷಯವು ಅಂದಿನ ಉತ್ತರಾದಿ ಮಠಾಧೀಶರ ತನಕವೂ ಹೋಯಿತು. ರಾಜಪುರೋಹಿತರು, ತಮ್ಮೆಲ್ಲ ಪ್ರಮಾಣಗಳನ್ನು ಸಂಕಲಿಸಿಕೊಂಡು, ಶ್ರೀಗಳ ಭೆಟ್ಟಿಯಾಗಿ, ಅವರೊಡನೆ ವಾದ-ವಿವಾದ ಮಾಡಿ ಬಂದರು.

ಅನಂತರ ಅವರ ಮುಂದಿನ ಗ್ರಂಥವೆಂದರೆ, **'ಶ್ರೀ. ಯಾಜ್ಞವಲ್ಕ್ಯರ ಚರಿತ್ರೆ'**ಯು. (೧೯೩೮). ಉಪನಿಷತ್ಕಾಲದ ದೊಡ್ಡ ತತ್ವವೇತ್ತರಾದ ಶ್ರೀ. ಯಾಜ್ಞವಲ್ಕ್ಯರ ಚರಿತ್ರೆಯ ಅಂಶಗಳು, ತಮ್ಮ ಕಾಣ್ವ ಹಾಗೂ ಯಜುರ್ವೇದ ಸಂಪ್ರದಾಯದ ಅಭ್ಯಾಸದಲ್ಲಿ ಈಗಾಗಲೇ ರಾಜಪುರೋಹಿತರಿಗೆ ದೊರೆತಿದ್ದುವು. ಉಪನಿಷತ್ತುಗಳು, ಅವುಗಳ ಮೇಲಿನ ವ್ಯಾಖ್ಯೆಗಳು ಇವನ್ನೆಲ್ಲ ಅಭ್ಯಸಿಸಿ, ಈ ಋಷಿವರೇಣ್ಯರ ಬಗ್ಗೆ ಇದ್ದ ಅಬದ್ಧ ಕಥೆ-ಕಲ್ಪನೆಗಳನ್ನೆಲ್ಲ ಸಂಶೋಧಕ ದೃಷ್ಟಿ

ಯಿಂದ ಉಜ್ಜಿ ನೋಡಿ, ತಮ್ಮ ಚರಿತ್ರ ಗ್ರಂಥವನ್ನು ಬರೆದರು. ತಮಗೆ ಬಂದಿದ್ದ ಅಲ್ಲಲ್ಲಿಯ ಗೌರವ ಧನದಿಂದ ತಾವೇ ಅದನ್ನು ಪ್ರಕಟಿಸಿದರು. ಈ ಪುಸ್ತಕಕ್ಕೆ ಪ್ರೊ. ಎನ್. ಆರ್. ಕುಲಕರ್ಣಿಯವರು ಮುನ್ನುಡಿ ಬರೆಯುತ್ತ "ಶ್ರೀ. ರಾಜಪುರೋಹಿತರು ಶ್ರೀ. ಯಾಜ್ಞವಲ್ಕ್ಯರಿಗೆ ಕೊಡಬೇಕಾದ ಋಷಿ ಋಣವನ್ನು ಈ ಸಂಶೋಧನೆಯಿಂದ ತೀರಿಸಿಬಿಟ್ಟಿದ್ದಾರೆ" ಎಂದು ಹೇಳಿದುದು ಆ ಕೃತಿಯಲ್ಲಿ ಸಾರ್ಥಕವಾಗಿದೆ.

## ಸನ್ಮಾನ

೧೯೧೦ ರಲ್ಲಿ ಅವರ ಮೊದಲ ಕೃತಿ ಪ್ರಕಟವಾಯಿತಷ್ಟೆ. ಅಂದಿನಿಂದ ಅವರು ಸಂಶೋಧನ ಮಾರ್ಗದಲ್ಲಿ ಶ್ರಮಿಸಿದ್ದುದರ ರೌಪ್ಯ ಮಹೋತ್ಸವವು ನೆರವೇರುವುದೋ ಎನ್ನುವಂತೆ ೧೯೩೫ ರ ಡಿಸೆಂಬರದಲ್ಲಿ ಮುಂಬಯಿಯಲ್ಲಿ ನಡೆದ ಸಾಹಿತ್ಯ ಸಮ್ಮೇಳನದ ಅಂಗವಾಗಿ ಏರ್ಪಟ್ಟ ಸಂಶೋಧನ ಗೋಷ್ಠಿಗೆ ಶ್ರೀ. ರಾಜಪುರೋಹಿತರು ಅಧ್ಯಕ್ಷರಾಗಿ ನಿಯೋಜಿತರಾದರು. ಇಷ್ಟು ದೀರ್ಘ ಕಾಲ ಸಂಶೋಧನ ಕಾರ್ಯದಲ್ಲಿ ಅವ್ಯಾಹತವಾಗಿ ನಿರತರಾದವರೂ, ಅಂದಿಗೂ ಮಾಡುತ್ತಿದ್ದವರೂ ಇಡೀ ಕರ್ನಾಟಕಕ್ಕೆ ಅವರೊಬ್ಬರೇ ಆಗಿದ್ದರು. ಪರಿಷತ್ಪ-ತ್ರಿಕೆ, ಮತ್ತಿತರ ಕಡೆಗಳಲ್ಲಿ ಅವರ ಲೇಖನಗಳು ಬಂದು, ಮೈಸೂರ ಸೀಮೆ ಯತ್ತಲೂ ಅವರ ಬಗ್ಗೆ ಆದರ ಭಾವವುಂಟಾಗಿದ್ದಿತು. ಕರ್ನಾಟಕದಿಂದ ಬಲು ದೂರದಿಂದ ನಿಂತ ಮುಂಬಯಿ ಕನ್ನಡಿಗರೂ ಈ ಗುಣಗ್ರಾಹಕತೆಯನ್ನು ತೋರಿ ದುದರಲ್ಲಿ ಆಶ್ಚರ್ಯವೇನೂ ಇಲ್ಲ.

ರಾಜಪುರೋಹಿತರು, ಸಮ್ಮೇಲನದಲ್ಲಿ ಅಧ್ಯಕ್ಷ ಭಾಷಣವಲ್ಲದೆ ಇತರ ನಾಲ್ಕಾರು ಲೇಖಕರೊಡನೆ ತಾವೂ, ಸಹವಾಸೀ ಬ್ರಾಹ್ಮಣರ ಬಗ್ಗೆ, ಒಂದು ಸಂಶೋಧಕ ಲೇಖವನ್ನು ಓದಿದರು! ಅಂತೂ ಕನ್ನಡದಲ್ಲಿ ಮೊದಲಬಾರಿ ಏರ್ಪಟ್ಟ ಸಂಶೋಧಕರ ಸಮ್ಮೇಲನಕ್ಕೆ ಪ್ರಥಮ ಅಧ್ಯಕ್ಷರಾದುದು ಒಂದು ಗಣನೀಯ ಸಂಕೇತವಾಗಿದೆ. ಆ ಮುಂದೆ ಒಂದೂ ಸಂಶೋಧಕ ಗೋಷ್ಠಿಯು ಸಾಹಿತ್ಯ ಸಮ್ಮೇಲನದಲ್ಲಿ ನೆರವೇರಿಲ್ಲ. ಸದ್ಯಕ್ಕೆ ರಾಜಪುರೋಹಿತರೇ ಪ್ರಥಮ ಅಧ್ಯಕ್ಷರು; ಅವರೇ ಕೊನೆಯವರು!

೧೯೩೭ ರಲ್ಲಿ ಶ್ರೀ. ರಾಜಪುರೋಹಿತರು ಬೆಂಗಳೂರಿಗೆ ಹೋಗಿದ್ದಾಗ, ಪರಿಷತ್ತಿನವರು 'ಬಿ. ಎಂ. ಶ್ರೀ.' ಯವರ ಅಧ್ಯಕ್ಷತೆಯಲ್ಲಿ ಅವರನ್ನು ಸತ್ಕರಿ

ಸಿದರು. ಶ್ರೀ.ಯವರು ಅವರ ಶ್ರದ್ಧೆ ಮತ್ತು ಕಾರ್ಯಗಳನ್ನು ಹೊಗಳಿದರು. ನಿಧಿಯನ್ನು ಅರ್ಪಿಸುತ್ತ, ಅಲ್ಪವಾದರೂ ಅದನ್ನು ಸಹಾಯ ಧನವೆಂದು ತಿಳಿಯದೆ ಗೌರವದ ಗುರುತೆಂದು ಭಾವಿಸಬೇಕಾಗಿ ವಿನಂತಿಸಿದರು.

ಅದೇ ವಾರ ಕಾಣ್ವಶಾಖೆಯ ಶುಕ್ಲ ಯಜುರ್ವೇದ ಸಂಸ್ಥೆಯವರು, ತಮ್ಮ ಶಾಖೆಗೆ ಅವರು ಸಲ್ಲಿಸಿದ ಅತ್ಯಮೋಘ ಸೇವೆಯ ಗುರುತೆಂದು, ಅವರಿಗೆ ಮಾನ ಪತ್ರವನ್ನೂ, ನಿಧಿಯನ್ನೂ ಸಮರ್ಪಿಸಿದರು.

## ಸಂಶೋಧನ ವ್ಯವಸಾಯ

ಇಷ್ಟರಲ್ಲಿ ಎರಡನೆಯ ಮಹಾಯುದ್ಧವು ಪ್ರಾರಂಭವಾಯಿತು. ಶ್ರೀ. ರಾಜಪುರೋಹಿತರ ಸಂಸಾರವೂ ಬೆಳೆದಿತ್ತು. ಅದಕ್ಕೆ ತಕ್ಕ ಹಾಗೂ ನಿಶ್ಚಿತವಾದ ವರಮಾನವೆಂಬುದು ಇರಲಿಲ್ಲ. ಬಡತನದ ಮೂಲಕ ಹೆಚ್ಚಿನ ಶಿಕ್ಷಣವನ್ನು ಮುಗಿಸಲಾರದೇ ಮಿಲಿಟರಿ ಸೇರಿದ್ದ ಹಿರಿಯ ಮಗನಿಂದ ಬರುತ್ತಿದ್ದ 'ಫ್ಯಾಮಿಲಿ ಎಲಾಟ್‌ಮೆಂಟಿನ' ೪೦-೪೫ ರೂಪಾಯಿಗಳನ್ನು ಚಾತಕ ಪಕ್ಷಿಯಂತೆ ಎದುರು ನೋಡುವ ಹೊತ್ತು ಬಂತು.

ಇಷ್ಟು ದಿನಗಳವರೆಗೆ ರಾಜಪುರೋಹಿತರು ತಮ್ಮ ಸಂಶೋಧನ ಕಾರ್ಯವನ್ನು ಧ್ಯೇಯವಾದಿಗಳಾಗಿ ನಡಸಿದರು. ೧೯೪೦ ರಿಂದ ಅವರ ಸಂಶೋಧನ ಕಾರ್ಯಕ್ಕೆ ವ್ಯವಸಾಯದ ಸ್ವರೂಪ ಬಂದಿತು. ಧಾರವಾಡದಲ್ಲಿ ಅದೇ ವರುಷ, ಮುಂಬಯಿ ಸರಕಾರದಿಂದ ಪ್ರಾರಂಭವಾದ ಕನ್ನಡ ಸಂಶೋಧನ ಸಂಸ್ಥೆಯ ವತಿಯಿಂದ ಪ್ರತಿ ತಿಂಗಳೂ ಸಂಶೋಧನ ಕಾರ್ಯಕ್ಕಾಗಿ ಮುಂಬೈ ಕರ್ನಾಟಕದಲ್ಲಿ ಒಂದೊಂದೆಡೆ ಸಂಚಾರಕ್ಕೆ ಹೋಗತೊಡಗಿದರು. ಅದೇ ಕೆಲಸ, ಶಿಲಾಲೇಖಗಳ ಪ್ರತಿ ತೆಗೆಯುವುದು; ತಾಡವಾಲೆ, ತಾಮ್ರ ಶಾಸನ, ನಾಣ್ಯ ಮುಂತಾದ ಪ್ರಾಚ್ಯವಸ್ತುಗಳನ್ನು ಕಲೆಹಾಕುವುದು. ರಾಜಪುರೋಹಿತರು ತಮ್ಮ ಕೊನೆಗಾಲದವರೆಗೂ ಆಗಾಗ ಇಂಥ ಸಂಚಾರಗಳನ್ನು ಕೈಕೊಂಡಿದ್ದಾರೆ. ವಿಸ್ತೃತ ವರದಿಗಳನ್ನು ಸಂಸ್ಥೆಗೆ ಒಪ್ಪಿಸಿದ್ದಾರೆ. ಇಲ್ಲಿಯ ಮತ್ತು ಇತಿಹಾಸ ಸಂಶೋಧನ ಮಂಡಳದಲ್ಲಿರುವ ಅವರ ವರದಿ, ಟಿಪ್ಪಣಿಗಳಲ್ಲಿ ಇತಿಹಾಸ ಸಂಶೋಧನೆಗೆ ನೆರವಾಗಬಲ್ಲ ಬೆಲೆಯುಳ್ಳ ಆಕರಗಳಿವೆ.

ತಮ್ಮ ಜೀವನದ ೩೫ ವರುಷಗಳನ್ನು ನಾಡಿಗಾಗಿ ಸವೆಯಿಸಿದರೆಂಬುದನ್ನರಿತ ಅವರ ಕೆಲವು ಹಿತೈಷಿಗಳು ಅವರ ಷಷ್ಟ್ಯಬ್ದಿಯನ್ನು ನೆರವೇರಿಸಬೇಕೆಂದು ನಿರ್ಧರಿಸಿಕೊಂಡರು. ಇತರ ಜೊತೆಗೆ ಅವರು ತಮ್ಮ ಬದುಕಿನಲ್ಲಿ ಬಡತನದ ಕಷ್ಟ ನಷ್ಟಗಳನ್ನು ಸೋಸಿದ್ದರಾದ್ದರಿಂದ ಸತ್ಕಾರದ ಜೊತೆಗೆ ನಿಧಿಯನ್ನು ಅರ್ಪಿಸುವ ಉದ್ದೇಶವೂ ಅದರಲ್ಲಿದ್ದಿತು. ೧೯೪೭ ರ ಜುಲೈ ೧೭ ರಂದು ಆ ಸಮಾರಂಭವು ನಡೆಯಬೇಕಿತ್ತಷ್ಟೆ. ಆದರೆ ಸಾಕಷ್ಟು, ಅಂದರೆ ಹೇಳಿಕೊಳ್ಳುವಷ್ಟು ನಿಧಿಯೆ ಕೂಡಿರಲಿಲ್ಲ. ಹಾಗಾಗಿ ಸಮಾರಂಭವನ್ನು ಮುಂದುವರಿಸಬೇಕೆಂಬ ಸಮಿತಿಯ ವಿಚಾರಕ್ಕೆ ರಾಜಪುರೋಹಿತರ ಸಮ್ಮತಿ ಇರಲಿಲ್ಲ. ಆದರೂ ಸಮಿತಿಯ ಸದಸ್ಯರು ಒಂದು ತಿಂಗಳು ಮತ್ತೆ ದುಡಿದರು. ಒಟ್ಟು ನಿಧಿ ಕೂಡಿದ್ದುದು ೧೫೨೦ ರೂಪಾಯಿಗಳು. ಕೊನೆಗೆ ಆಗಸ್ಟ ೧೦ ರಂದು ಶ್ರೀ. ಮುದವೀಡು ಕೃಷ್ಣರಾಯರ ಅಧ್ಯಕ್ಷತೆಯಲ್ಲಿ ಸಭೆ ನೆರೆಯಿತು. ಸತ್ಕಾರ ಸಮಾರಂಭ ನೇರ್ಪಟ್ಟಿತು.

ನಿಧಿಯನ್ನು ಕೂಡ್ರಿಸಿದವರಲ್ಲಿ ಶ್ರೀ. ರಾಜಪುರೋಹಿತರೂ ಒಬ್ಬರು. ತಮ್ಮ ಸತ್ಕಾರಕ್ಕಾಗಿ ತಾವೇ ಧನ ಸಂಗ್ರಹ ಮಾಡಿದರು. ' ರಾಜಪುರೋಹಿತ ಸತ್ಕಾರ ಸಮಿತಿ ' ಎಂಬ ಶೀರ್ಷಿಕೆಯ ಅಡಿಯಲ್ಲಿರುವ ಪಾವತಿಗೆ ರಾಜಪುರೋಹಿತರೇ ಸಹಿ ಮಾಡಿ ಪಾವತಿಯನ್ನು ಹರಿದುಕೊಟ್ಟರು !

ಇದರಿಂದ ನಾಲ್ಕು ಜನ ಅವರನ್ನು ಹಾಸ್ಯಾಸ್ಪದವಾಗಿ ಕಾಣುವಂತಾಯಿತು. ಆದರೆ ಇದರಲ್ಲಿ ರಾಜಪುರೋಹಿತರಿಗೆ ಅತ್ಯಾಸೆ ಎಂಬುದೇನೂ ಇರಲಿಲ್ಲವೆಂಬುದನ್ನು ಮರೆಯಬಾರದು. ಅವರಿಗೆ ಹಣದ ಅಡಚಣೆ ಇದ್ದುದು ನಿಜ. ತಮ್ಮ ಸಂಶೋಧನ ವಿಚಾರಗಳ ಪ್ರಾಮಾಣ್ಯಕ್ಕಾಗಿ ಅವರು ನಾಲ್ಕು ಊರು ತಿರುಗಾಡಬೇಕಾಗುತ್ತಿದ್ದಿತು. ಅಲ್ಲಿಗೆ ಹೋದೇನೆಂದರೂ, ಗಾಡಿಯ ಹಾಸಲಿನ ಹಣವು ಅವರ ಹತ್ತಿರ ಇರುತ್ತಿರಲಿಲ್ಲವೆಂಬುದನ್ನು ನೆನೆಯಬೇಕು. ಸತ್ಕಾರ ಸಮಿತಿಯ ಕಾರ್ಯಕರ್ತರು ಎಷ್ಟೋ ಶ್ರದ್ಧಾಳುಗಳಾಗಿದ್ದರೂ, ಅದೇಕೋ ಹಣವು ವಿಶೇಷವಾಗಿ ಕೂಡ್ರಿರಲಿಲ್ಲ. ಅದಕ್ಕೆ ರಾಜಪುರೋಹಿತರ ಸೌಮ್ಯ ವ್ಯಕ್ತಿತ್ವವೂ ಕಾರಣವಾಗಿದ್ದಿತು. ಇಂಥ ಸ್ಥಿತಿಯಲ್ಲಿ ತಾನೂ ಒಬ್ಬ ಸ್ವಯಂ ಸೇವಕ ಎಂಬ ಭಾವನೆ ಅವರಿಗಿದ್ದುದರಿಂದ ತಾವು ಮಾಡುವುದು ಅನೌಚಿತ್ಯವಾದ, ಹೀನಾಯವಾದ ಒಂದು ಕಾರ್ಯ ಎಂದು ಅವರಿಗೆ ಅನಿಸಲಿಲ್ಲ. ಹಣ ಕೂಡದಿದ್ದಾಗ, ಅದಕ್ಕಾಗಿ ಸನ್ಮಾನ ಸಭೆಯನ್ನು ಮುಂದುವರಿಸುವುದು ಬೇಡ

ಎಂದು ಯಾವ ನಿರ್ಲಿಪ್ತತೆಯಿಂದ ಹೇಳಿದರೋ ಅದೇ ನಿರ್ಲಿಪ್ತ ಭಾವದಿಂದ ತಮ್ಮ ಸತ್ಕಾರಕ್ಕಾಗಿ ತಾವೇ ಧನಸಂಗ್ರಹ ಮಾಡಿದರು. ನಮ್ಮ ಸಾಮಾಜಿಕ ವಿವೇಕಕ್ಕೆ ಇದಕ್ಕಿಂತ ಹೆಚ್ಚಿನ ಅಣಕ ಬೇಡವೆಂದು ತೋರುತ್ತದೆ.

ಅನಂತರದ ಆರೇಳು ವರ್ಷಗಳನ್ನು ಕಾಣ್ವ ಶಾಖೆಯ ವಿಶೇಷ ಅಭ್ಯಾಸದಲ್ಲಿ ಕಳೆದರು. ತನ್ಮೂಲಕವಾದ ಬೇರೆ ಬೇರೆ ಬ್ರಾಹ್ಮಣ ಶಾಖೆಗಳ ಮೂಲವನ್ನು ಗೊತ್ತು ಹಚ್ಚುವುದರಲ್ಲಿಯೂ ಕಳೆದರು. ಕನ್ನಡದಲ್ಲಿ ಸಂಶೋಧನ ಬರವಣಿಗೆಗೆ ಮನ್ನಣೆಯಾಗಲೀ ಪುರಸ್ಕಾರವಾಗಲೀ, ಅಷ್ಟಕ್ಕಷ್ಟೇ ಎಂಬುದು ಅವರಿಗೆ ತೋರಿಬಂದಿತ್ತು. ಅಂತೆಯೇ ಆ ಲೇಖನಗಳನ್ನು ಮರಾಠಿಯಲ್ಲಿ ಭಾಷಾಂತರಿಸಿ ಪ್ರಕಟಣೆಗೆ ಕಳುಹಿದರು. ಚಿಪಳೂಣ ಮತ್ತು ತಾಳಗುಂದ ಅಗ್ರಹಾರಗಳ ಮೇಲಿನ ಲೇಖನಗಳು ಮರಾಠೀ ಮಾಸಿಕವಾದ 'ಸಹ್ಯಾದ್ರಿ'ಯಲ್ಲಿಯೂ ಆಮೇಲೆ ನಮ್ಮ ಪ್ರಬುದ್ಧ ಕರ್ನಾಟಕದಲ್ಲಿಯೂ ಪ್ರಕಟವಾದುವು. ಅದರಂತೆ ಕರಹಟ (ಕರ್ಹಾಡ) ಅಗ್ರಹಾರದ ಮೂಲ ಸ್ವರೂಪದ ಬಗ್ಗೆ ಆಳವಾಗಿ ಅಭ್ಯಾಸ ಮಾಡಿ ಬರೆದ ಮರಾಠೀ ಲೇಖನವು ಬಹುಜನ ಮರಾಟಿಗರಿಗೆ ಮೆಚ್ಚಿಗೆಯಾಯಿತು. ಇವರಿಗೆ ಗುರುತಿಲ್ಲದ, ಆ ಸಮಾಜದ ಅನೇಕ ಜನರಿಂದ ಮೆಚ್ಚಿಕೆಯ ಕಾಗದಗಳು ಬಂದುವು. ಅದರಂತೆ ಸಹವಾಸೀ ಬ್ರಾಹ್ಮಣರು, ಚಿತ್ಪಾವನರು ಇವರ ಬಗ್ಗೆಯೂ ಅಷ್ಟೇ ಬೆಲೆಯುಳ್ಳ ಲೇಖನಗಳು ಮರಾಠಿಯಲ್ಲಿ ಪ್ರಕಟವಾದುವು. ಈಚೆಗೆ ಮುಂಬಯಿಯಿಂದ ಹೊರಟ ಕಾಣ್ವ ವಿಕಾಸವೆಂಬ ಮರಾಠೀ ಪತ್ರಿಕೆಯ ಪುರಸ್ಕರ್ತರಾಗಿದ್ದರು.

ಕನ್ನಡದಲ್ಲಿ ಆಮೇಲೆ ಬರೆದದ್ದೆಂದರೆ 'ವೀರಮಾತೆ' ಯಲ್ಲಿ ಬಂದ ತಿಮ್ಮಮ್ಮನವರ ಚರಿತೆ. ತಿಮ್ಮಮ್ಮ ತಿರುಪತಿಯ ಭಕ್ತಳಾಗಿದ್ದು ಬಡವರಿಗೆ ೬೪ ಸಲ ಯಾತ್ರೆ ಮಾಡಿಸಿದ ಅವಳ ಚರಿತ್ರೆಯನ್ನು ಬರಿಯ ಹಾಡು, ಐತಿಹ್ಯದಂತಕಥೆಗಳಿಂದ ರಚಿಸಿದ್ದಾರೆ. ವನಿತಾ ಸೇವಾ ಸಮಾಜ, ಮಹಿಳಾ ವಿದ್ಯಾಲಯ, ಹೆಣ್ಣುಮಕ್ಕಳ ಟ್ರೇನಿಂಗ ಕಾಲೇಜು, 'ವೀರಮಾತೆ'ಯ ಕಾರ್ಯಾಲಯ ಇವುಗಳೊಡನೆ ಇದ್ದ ಅವರ ನಿಕಟ ಸಂಬಂಧವೇ ಈ ಲೇಖನ ಮಾಲೆಗೆ ಕಾರಣವಾಯಿತು.

ಅವರ ಕೊನೆಯ ಲೇಖವು ಬಸವಣ್ಣನವರ ಸಮಾಧಿಯ ಸ್ಥಳ ನಿರ್ಣಯದ ಬಗ್ಗೆ ಇದ್ದಿತು. ಬರೆದ ಆ ಒಂದೇ ಪುಟದಲ್ಲಿ, ಕೊನೆಯ ವಾಕ್ಯವು

ಸಹಿತ ಅರ್ಥಕ್ಕೆ ನಿಂತಿದೆ; ಕನ್ನಡದಲ್ಲಿ ಇತಿಹಾಸ ಸಂಶೋಧನ ಕಾರ್ಯವು ತೀರ ಅಪೂರ್ಣವಾಗಿದೆ ಎಂದು ತೋರಿಸುವಂತೆ ಆಗಿದೆ!

## ಅನಾರೋಗ್ಯ

೧೯೫೦ ನೆಯ ಇಸವಿಯ ನಂತರ ಅವರ ಆರೋಗ್ಯವು ಸರಿಯಾಗಿ ಉಳಿದಿರಲಿಲ್ಲ. ಸಾದಾ ಜೀವನದ ಸಾದಾ ಅನುಕೂಲತೆಗಳೂ ಇಲ್ಲದಿದ್ದ ಮೂಲಕ ದೇಹವು ಶಿಥಿಲಗೊಂಡಿತ್ತು. ತಿರುಗಾಟದಿಂದ ಜರ್ಜರಿತವಾಗಿದ್ದಿತು. ಅವರ ಆರೋಗ್ಯ ಎಂದಿಗೂ ಅಷ್ಟೇಯೆ ಎನ್ನಬೇಕು. ಪಿತ್ತಬಾಧೆ, ಚಳಿಜ್ವರ, ಅಪಚನ, ಹೊಟ್ಟೆಶೂಲೆ ಇವು ನೆನಪಾದಾಗ ಒಮ್ಮೆ ಬಂದು ಹೋಗುತ್ತಿದ್ದುವು. ದೇಹ ಸೌಖ್ಯ, ಸ್ವಾಸ್ಥ್ಯಗಳಿಗಾಗಿ ಅವರು ಎಂದೂ ಗಮನ ಕೊಟ್ಟವರಲ್ಲ. ಜಡ್ಡು ಬಂದಾಗಲೊಮ್ಮೆ ದೇಹವನ್ನು ದಂಡಿಸುತ್ತಿದ್ದರು. ಎಲ್ಲ ಬೇನೆಗಳಿಗೂ ತಾರಕೋಪಾಯವೆಂದರೆ ಉಪವಾಸವೆಂದು ಭಾವಿಸಿದ್ದರು. ೧೯೫೦ ರಲ್ಲಿ ಕರುಳಿನ ಚಿಕಿತ್ಸೆಗಾಗಿ ಆಪರೇಶನ್ ಮಾಡಬೇಕಾಯಿತು. ಮತ್ತೊಂದು ವರ್ಷ ಕಳೆಯಿತೆನ್ನುವಷ್ಟರಲ್ಲಿ ಮೂತ್ರ ರೋಗದಿಂದ ಬಳಲಿದರು. ಅತ್ಯಂತ ಶೋಚನೀಯ ರೀತಿಯಲ್ಲಿ ಅವರ ನಿತ್ಯ ಜೀವನ ಸಾಗಿದ್ದಿತು.

ಸಾಹಿತ್ಯಿಕ ಸಂತ್ರಸ್ತರಿಗೆ ಧನಸಹಾಯ ಮಾಡಬೇಕೆಂದು ಭಾರತ ಸರಕಾರವು ಇಟ್ಟುಕೊಂಡ ಯೋಜನೆಯನ್ನಯ ಶ್ರೀ. ರಾಜಪುರೋಹಿತರು ತಮ್ಮ ಆತ್ಮೀಯರೊಬ್ಬರ ಸೂಚನೆಯ ಮೇರೆಗೆ ಅರ್ಜಿಯನ್ನು ಹಾಕಿದರು. ಪತ್ರವ್ಯವಹಾರ ನಡೆದಿದ್ದಿತು. ಪರಿಹಾರ ಒದಗುವ ಸಂಭವವೂ ಇದ್ದಿತು. ಆದರೆ ಅವರ ಇಡೀ ಪ್ರಾಪಂಚಿಕ ಜೀವನವು ದುರ್ದೈವದ ಮೆಟ್ಟಿಲುಗಳನ್ನೇರುತ್ತ ನಡೆದಿದ್ದಾಗ ಇದೂ ಹಾಗೆಯೇ ಆಯಿತು. ಅವರು ತೀರಿಕೊಂಡ ಮೂರನೆಯ ದಿನ, ಅವರ ಮನೆಗೆ ಸರಕಾರದ ವಿಚಾರಣೆಗಾಗಿ ವಿಷಯ ಬಂದು ಮುಟ್ಟಿತ್ತು ! ಆದರೇನು ಪ್ರಯೋಜನ ?

೧೯೫೩ ರ ಆಗಸ್ಟ್ ತಿಂಗಳಲ್ಲಿ ಶ್ರೀ. ರಾಜಪುರೋಹಿತರು ಹಾವೇರಿ ತಾಲೂಕಿನ ಹುಂಗೂರಿನಲ್ಲಿರುವ ಮಗಳ ಮನೆಗೆ ಕೆಲ ದಿನ ವಾಸವಾಗಿದ್ದು, ಪ್ರಕೃತಿ ಸುಧಾರಣೆಗೆಂದು ಹೋದರು. ಇತ್ತ ಧಾರವಾಡದಲ್ಲಿ ಇತಿಹಾಸ ಸಂಶೋಧನ ಮಂಡಳದ ಅಡಿಗಲ್ಲನ್ನು ನೆಡುವ ಸಮಾರಂಭದ ಎತ್ತುಗಡೆ ನಡೆ

ದಿದ್ದಿತು. ಅದು ತಿಳಿದುಬಂದಮೇಲೆ ರಾಜಪುರೋಹಿತರ ಜೀವವು ಧಾರವಾಡಕ್ಕೆ ಬರಲು ಹಾತೊರೆಯಿತು. ಮಗಳು ಅಳಿಯ ಎಷ್ಟು ಬೇಡವೆಂದರೂ ಕೇಳದೆ, ೨೩ ನೆಯ ತಾರೀಖಿನ ಸಂಜೆಗೆ ಧಾರವಾಡಕ್ಕೆ ಬಂದುಬಿಟ್ಟರು.

ಈ ಹಿಂದೆ ಅನೇಕ ಸಲ ಆಗಿದ್ದಂತೆ ಆ ದಿನವೂ ಅವರ ಪ್ರಕೃತಿಯು ಅಸ್ವಾಸ್ಥ್ಯಗೊಂಡಿದ್ದಿತು. ರಾತ್ರಿಯೆಲ್ಲ ಏನೇನು ಯೋಚಿಸಿದರೊ; ಏನೂ ನಿದ್ದೆ ಹತ್ತಿರಲಿಲ್ಲ. ಸಂಜೆಗೆ ಸದ್ದಿಲ್ಲದೆ ಬಂದವರು ಬೆಳಗಿನ ೩–೨೫ ರ ವೇಳೆಗೆ ಸ್ವಲ್ಪವೂ ಸದ್ದಾಗದಂತೆ ಕಣ್ಣು ಮುಚ್ಚಿದರು. ಅವರ ಜೀವ ಈ ಲೋಕವನ್ನು ಬಿಟ್ಟು ದೂರ, ಬಹುದೂರ ಹೊರಟು ಹೋಯಿತು.

---

# ೨. ಸಂಶೋಧನ ಕಾರ್ಯ

ಶ್ರೀ. ರಾಜಪುರೋಹಿತರು ಲೇಖನಗಳಿಗೆ ತಮ್ಮ ಹೆಸರನ್ನು ಬರೆಯುವಾಗ 'ಇತಿಹಾಸ ಸಂಶೋಧಕ' ಎಂಬ ಉಪಾಂಕಿತವನ್ನು ಸೇರಿಸುತ್ತಿದ್ದರು. ಅವರ ಮಾತಿನಲ್ಲಿಯೆ ಹೇಳುವುದಾದರೆ 'ಇತಿಹಾಸವೆಂದರೆ ಆಗಿಹೋದದ್ದು'; ಅದು ಯಾವುದೇ ಇರಲಿ. ಅವರ ಕಾರ್ಯ ಸಂಶೋಧನೆ; ಹುಡುಕಿ ತೆಗೆಯುವುದು. ಹಳೆಯದನ್ನು ಅವರು ಹುಡುಕಿ ತೆಗೆಯುತ್ತಿದ್ದವರು ಎಂದು ಅದರ ಅರ್ಥ. ಹಾಗೆ ನೋಡಿದಲ್ಲಿ, ಅವರ ಶೋಧನೆಯು ಕರ್ನಾಟಕದ ರಾಜಮನೆತನಕ್ಕೆ ಸಂಬಂಧಿಸಿದ್ದಿರಬಹುದು, – ಕವಿಗಳ ಕುಲ, ಕಾಲವನ್ನು ಕೆದಕುವುದರಲ್ಲಿರಬಹುದು, ಮಠಾಚಾರ್ಯರ ಮೂಡೆವನ್ನು ಅರಸುವುದರಲ್ಲಿರಬಹುದು.

ರಾಜಪುರೋಹಿತರು ಈ ಸಂಶೋಧನ ಕಾರ್ಯದಲ್ಲಿ ತೊಡಗಿದುದೆಂತು ಎಂದು ವಿಚಾರಿಸುವಾಗ ಒಂದು ಮಾತನ್ನು ನಾವು ಗಮನದಲ್ಲಿಟ್ಟುಕೊಳ್ಳಬೇಕಾಗುತ್ತದೆ. ಸಂಶೋಧನವೂ ಒಂದು ಕಲೆ. ಕಲಾ ಜೀವನವು ಮೂಲತಃ ದೈವಾಯತ್ತವಾದುದು; ಎಂದರೆ ಜನ್ಮ ಜನ್ಮದ ಸಂಸ್ಕಾರ ಸಾರವಾದುದು. ಅದಕ್ಕೆ ಕಲಾವಿದನು ಹುಟ್ಟಿ ಬಂದ ಪರಿಸ್ಥಿತಿಯು ಪೋಷಕವಾಗಬಹುದು, ಇಲ್ಲವೆ ಮಾರಕವಾಗಿ ಪರಿಣಮಿಸಬಹುದು.

ಈ ಹಿನ್ನೆಲೆಯಲ್ಲಿ ನೋಡಿದಾಗ ರಾಜಪುರೋಹಿತರಲ್ಲಿ ಸಂಶೋಧನೆಯ ವಿಶಿಷ್ಟ ಚಿಕಿತ್ಸಕ ಬುದ್ಧಿಯು ಜನ್ಮದಾರಭ್ಯ ಇತ್ತು. ಆ ರೀತಿಯಲ್ಲಿ ದುಡಿಯಬೇಕು ಎನ್ನುವ ಆವರ್ತರೂಪಿಯಾದ ಅಂತಃಶಕ್ತಿಯು ಅವರಲ್ಲಿದ್ದಿತು. ಆ ದೈವದತ್ತ ಪ್ರತಿಭೆಯನ್ನು ಅವರು ತಮ್ಮ ವ್ಯಾಸಂಗದಿಂದ ಬೆಳೆಸಿಕೊಂಡರು. ತಮ್ಮ ದೃಢ ನಿರ್ಧಾರದಿಂದ ಉಳಿಸಿಕೊಂಡರು.

ಅಂದಿನ ಸಾಮಾಜಿಕ ಸ್ಥಿತಿಯನ್ನೂ ತುಸು ಲಕ್ಷಿಸಬೇಕು. ಮರಾಠಿಯಿಂದ ಕನ್ನಡವನ್ನು ಸಂರಕ್ಷಿಸಲು ಮೇಲೆದ್ದ ನಾಡ ಚಳುವಳಿಯೂ ರಾಜಪುರೋಹಿತರು ಸಂಶೋಧನ ರಂಗವನ್ನು ಪ್ರವೇಶಿಸಲು ಕಾರಣವಾಗಿದ್ದಿತು. ಗಾಂಧೀ ಯುಗಾರಂಭದಲ್ಲಿ ಹೇಗೆ ರಾಷ್ಟ್ರೀಯ ಚಳುವಳಿಗೆ ಭಾವನೋದ್ವೇಗದ ಬೆಂಬಲವು ಒದಗಿ ಬಂದಿತೊ, ಹಾಗೆಯೆ ಕನ್ನಡವನ್ನು ಪುನರುಜ್ಜೀವಿಸುವ

ಕಾರ್ಯದಲ್ಲಿಯೂ, ಕನ್ನಡ ತಾಯಿಯ ಸೇವೆ, ಪೂಜೆಗಳನ್ನು ಮಾಡಿದಂತೆ, ಎಂಬ ಭಾವನೆಗಳು ಆ ಕಾಲದಲ್ಲಿ ಸಾಹಿತ್ಯಿಕ ಚೇತನವುಳ್ಳ ಯಾರನ್ನೇ ಆಗಲಿ, ಕಲಕುವಂತಹವಾಗಿದ್ದುವು. ಉತ್ತರ ಕರ್ನಾಟಕದಲ್ಲಿ ಕಡಪಾ ರಾಘವೇಂದ್ರ ರಾಯರ ಏಕೀಕರಣದ ಕಹಳೆ, ಶಾಂತಕವಿಗಳ ರಾಷ್ಟ್ರೀಯ ಕೀರ್ತನೆಗಳು, ಮುದವೀಡು ಕೃಷ್ಣರಾಯರ ಸಿಂಹವಾಣಿ, ರಾ. ಹ. ದೇಶಪಾಂಡೆಯವರ ಸಂಸ್ಥಾ ಕಾರ್ಯ, ಆಲೂರ ವೆಂಕಟರಾಯರ ಮಾರ್ಗದರ್ಶನ ಇವು ಯಾರನ್ನೂ ಉದಾತ್ತ ಕೆಲಸಕ್ಕೆ ಹಚ್ಚುವಂತಹವಾಗಿದ್ದುವು.

ಶ್ರೀ. ರಾಜಪುರೋಹಿತರು ಮೊದಲಿನಿಂದಲೂ ಧರ್ಮಪರರು, ಭಕ್ತಿಭಾವ, ಸಜ್ಜನಿಕೆ, ಆತ್ಮನಿಷ್ಠೆ ಇವು ಮೈಯೊಡನೆ ಮೈತಾಳಿ ಬಂದವುಗಳು. ಅಗಡಿ ಮತ್ತು ಧಾರವಾಡಗಳಲ್ಲಿಯ ಅವರ ಪರಿಸರವೂ ಇದಕ್ಕೆ ಅನುಗುಣವಾಗಿದ್ದಿತು. ಹಾಗಾಗಿ ಧರ್ಮ ಮತ್ತು ಮತಗಳತ್ತ ಅವರ ಒಲವು ಇರುವುದು ಸಹಜವೇ ಆಗಿದ್ದಿತು. ಇದರಲ್ಲಿ ಒಂದು ವಿಶೇಷವೆಂದರೆ, ಮರಾಠಿಗರ ಇತಿಹಾಸ ಜ್ಞಾನವೂ, ಆಲೂರ ವೆಂಕಟರಾಯ ಮುಂತಾದವರ ಇತಿಹಾಸ ಕಾರ್ಯವೂ ರಾಜಪುರೋಹಿತರ ವೃತ್ತಿಯ ಮೇಲೆ ಪರಿಣಾಮಮಾಡಿ, ಅವರ ಈ ಧಾರ್ಮಿಕ ವರ್ತುಲದಲ್ಲಿ ಹಳೆಯದನ್ನು, ಸತ್ಯವಾಗಿದ್ದುದನ್ನು ಹುಡುಕಿ ತೆಗೆಯಬೇಕೆನ್ನುವ ಹಂಬಲವನ್ನುಂಟುಮಾಡಿದುವು. ಹೀಗೆ ಧರ್ಮ ಮತ್ತು ಇತಿಹಾಸ ಎರಡೂ ಸಮ್ಮಿಳಿತವಾಗಿ ಅವರ ಸಂಶೋಧನೆಯ ಕಾರ್ಯವು ಮುಂದುವರಿಯಿತು.

## ಕೃತಿಗಳು

ಶ್ರೀ. ರಾಜಪುರೋಹಿತರ ಬಿಡಿ ಲೇಖನಗಳು ನೂರಕ್ಕೆ ಮೇಲ್ಪಟ್ಟು ಇದ್ದರೂ ಗ್ರಂಥ ರೂಪದಲ್ಲಿ ಪ್ರಕಟವಾದ ಕೃತಿಗಳು ಐದು ಮಾತ್ರ.

೧. ದಾನ–ಧರ್ಮ ಪದ್ಧತಿ (೧೯೧೦).

೨. ಶ್ರೀಮತ್ಸುರೇಶ್ವರಾಚಾರ್ಯರ ಚರಿತ್ರೆಯು (೧೯೨೨).

೩. ಕರ್ನಾಟಕದ ಇತಿಹಾಸವೂ ಅದರ ವರ್ಣನೆಯೂ (೧೯೩೦).

೪. ಶ್ರೀ ಮನ್ಮಧ್ವಾಚಾರ್ಯರು ಹಾಗೂ ಶ್ರೀಮಜ್ಜಯತೀರ್ಥರ ಚರಿತ್ರೆಯು (೧೯೩೬).

೫. ಶ್ರೀ ಯಾಜ್ಞವಲ್ಕ್ಯ ಮಹಾಮುನಿಗಳ ಚರಿತ್ರೆಯು (೧೯೩೯).

ಅವರ ಮೊದಲ ಪುಸ್ತಕವಾದ 'ದಾನಧರ್ಮ ಪದ್ಧತಿ'ಯು ವಿಷಯ ಮಂಡನೆಯಲ್ಲಿ ಒಂದು ವಿಶಿಷ್ಟವಾದ ಕೃತಿಯಾಗಿದೆ. ದಾನಧರ್ಮದ ಪ್ರಾಚೀನ ಹಾಗೂ ಅರ್ವಾಚೀನ ಸ್ವರೂಪವನ್ನು ವಿವರಿಸುತ್ತ ಮನುಸ್ಮೃತಿ, ಯೋಗವಾಸಿಷ್ಠ ಮುಂತಾದವುಗಳ ಆಧಾರವನ್ನು ಹೇಳಿ, ಹಿಂದಿನ ಹಾಗೂ ಇಂದಿನ ದಾನಶೂರರ ಚರಿತ್ರೆಗಳನ್ನು ಕೊಟ್ಟಿದ್ದಾರೆ. ಅವರಲ್ಲಿ ದಧೀಚಿಯಿಂದ ಮೊದಲ್ಗೊಂಡು ದಿನಶಾ ಪೆಟಿಟರ ವರೆಗೆ ವ್ಯಕ್ತಿಗಳ ದಾನಕಥನಗಳಿವೆ. ಮುಂದೆ ದಾನಧರ್ಮದಲ್ಲಿ ಕುಪಾತ್ರ ಸತ್ಪಾತ್ರ ಇವುಗಳ ಫಲಾಫಲಗಳನ್ನು ವಿವೇಚಿಸಿದ್ದಾರೆ. ದಾನ ಮಾಡುವ ರೀತಿ ನೀತಿಗಳನ್ನು ಕೊಟ್ಟು, ಆಧುನಿಕ ಕಾಲದಲ್ಲಿ ದಾನಧರ್ಮವು ಯಾವ ರೀತಿಯಾಗಿರಬೇಕು ಎಂಬುದನ್ನು ವರ್ಣಿಸಿದ್ದಾರೆ. ಅವರ ಅಭಿಪ್ರಾಯಾನುಸಾರ, ಮಹಾಪುರುಷರ ಜಯಂತಿ, ಸ್ಮಾರಕಗಳು, ಗೋರಕ್ಷಣ ಶಾಲೆಗಳು, ರಾತ್ರಿ ಶಾಲೆಗಳು, ಅಂಗಹೀನರ ಸಂಸ್ಥೆಗಳು ಇವುಗಳಿಗೆ ದಾನಮಾಡಬೇಕು ಎಂದಿದ್ದಾರೆ. ಒಟ್ಟಿನಲ್ಲಿ ದಾನದ ಮೂಲತತ್ವವು ಮೂಲತಃ ವ್ಯಕ್ತಿಯ ಪುಣ್ಯ ಸಾಧನೆಯೆಂದು ಹಿಂದಿನವರು ಹೇಳಿದ್ದರೂ ಇಂದಿನವರು ದಾನಮಾಡುವಾಗ ರಾಷ್ಟ್ರಹಿತವನ್ನು ಗಣಿಸಬೇಕು ಎಂದು ಎಚ್ಚರಿಸಿದ್ದಾರೆ.

೧೯೧೯ ರಲ್ಲಿ ಮಾಡರ್ನ್ ರಿವ್ಯೂದಲ್ಲಿ W ಎಂಬ ಅಂಕಿತದಲ್ಲಿ ಒಬ್ಬರು ಈ ಪುಸ್ತಕದ ಮೆಚ್ಚಿಕೆಯ ವಿಮರ್ಶೆಯನ್ನು ಬರೆದರು. ಮತ್ತು ಇದನ್ನು ವ್ಯಾಪಾರಿಗರೂ, ಸ್ತ್ರೀಯರೂ ವಿಶೇಷವಾಗಿ ಓದಬೇಕು ಎಂದು ಸೂಚಿಸಿದ್ದಾರೆ! ಈ ಪುಸ್ತಕವು ರಾಜಪುರೋಹಿತರ ಅಭ್ಯಾಸೀ ವೃತ್ತಿಗೂ, ಧರ್ಮಪರ ವೃತ್ತಿಯಲ್ಲಿ ಕಂಡುಬರುವ ಆಧುನಿಕತೆಗೂ ನಿದರ್ಶನವಾಗಿದೆ.

ಸುರೇಶ್ವರಾಚಾರ್ಯರ ಮೇಲಿನ ಗ್ರಂಥವನ್ನು ಸಾಂಪ್ರದಾಯಿಕ ರೀತಿಯಲ್ಲಿ ಬರೆದಿದ್ದಾರೆಂದು ಕಂಡುಬಂದರೂ, ಇದುವರೆಗೆ ಬೆಳಕಿಗೆ ಬಾರದ ಅನೇಕ ಐತಿಹಾಸಿಕ ಸಂಗತಿಗಳನ್ನು ಶ್ರೀ. ರಾಜಪುರೋಹಿತರು ಕಂಡುಹಿಡಿದಿದ್ದಾರೆ. ಸಂಶಯಾಸ್ಪದ ಅಂಶಗಳಿಗೆ ಪ್ರಮಾಣಗಳನ್ನು ಕೊಟ್ಟಿದ್ದಾರೆ. ಮುಖ್ಯತಃ ಶ್ರೀ. ಶಂಕರಾಚಾರ್ಯರಿಂದ ಜಯಿಸಲ್ಪಟ್ಟ ಮಂಡನ ಮಿಶ್ರರೂ, ಸುರೇಶ್ವರಾಚಾರ್ಯರೂ ಇಬ್ಬರೂ ಒಂದೇ ಎಂಬುದನ್ನು ಸಿದ್ಧಮಾಡಿದ್ದಾರೆ. ಜೊತೆಗೆ ಪರಿಶಿಷ್ಟರೂಪವಾಗಿ ಆಚಾರ್ಯರ ಕಾಲ ನಿರ್ಣಯ, ಶೃಂಗೇರಿ ಮಠದ ಮೂಲ ಮತ್ತು ಪರಂಪರೆ ಇವುಗಳನ್ನೂ ಕೊಟ್ಟಿದ್ದಾರೆ.

ಪಠ್ಯ ಪುಸ್ತಕವೆಂದೊಡನೆಯೇ ಬೇಸರ ಹುಟ್ಟಿಸುವ ಕೃತಿಯಲ್ಲವೆಂಬ
ಭಾವನೆ ನಮಗುಂಟಾಗುವುದು ಸಹಜವೇ ಆಗಿದೆ. ಆದರೆ **'ಕರ್ನಾಟಕದ**
**ಇತಿಹಾಸವೂ ಅದರ ವರ್ಣನೆಯೂ'** ಅದಕ್ಕೆ ಹಿರಿಯ ಅಪವಾದವಾಗಿದೆ.
ಕನ್ನಡ ನಾಡಿನ ಸಂಪೂರ್ಣ ಇತಿಹಾಸವನ್ನು ಸ್ವಲ್ಪದರಲ್ಲಿ ಮತ್ತು ತಿಳಿಯಾದ
ಶೈಲಿಯಲ್ಲಿ ವಿವರಿಸುವ ಪುಸ್ತಕಗಳು ಒಂದಾದರೂ ಆ ಹಿಂದೆ ಇರಲಿಲ್ಲ.
ಕರ್ನಾಟಕದ ಇತಿಹಾಸದ ಬಗ್ಗೆ ಗೊತ್ತಾದ ಸಂಗತಿಗಳು ಅಲ್ಲಿ ಇಲ್ಲಿ ಹರಡಿ
ಹೋಗಿದ್ದುವು. ಅವನ್ನೆಲ್ಲ ಸಂಕಲಿಸಿ ಕೊಡುವುದೂ ಅಗತ್ಯವಿದ್ದಿತು. ಬರೆಯು
ವಾಗ ಕರ್ನಾಟಕದ ಬಗ್ಗೆ ಅಭಿಮಾನವೆನಿಸುವಂಥ ಸಂಗತಿಗಳನ್ನು ಎತ್ತಿ
ಕೊಟ್ಟಿದ್ದಾರೆ. ಪುಸ್ತಕದಲ್ಲಿ ಬಂದಿರುವ ಕಾಲ ಕಾಲದ ಕರ್ನಾಟಕದ ನಕಾಶೆ
ಗಳನ್ನು ಅವರೇ ಕಷ್ಟಬಟ್ಟು ತಯಾರಿಸಿದ್ದಾರೆ. ನಾಡಿನ ಮೇರೆಯ ಪ್ರತಿ ಗೆರೆ
ಯನ್ನೂ ನಿರ್ಧರಿಸುವಾಗ ಜಾಗರೂಕತೆಯನ್ನು ತೋರಿದ್ದಾರೆ. ಅವರು ಕೊಟ್ಟಿ
ರುವ ಕರ್ನಾಟಕದ ೧೭ ರಾಜಮನೆತನಗಳ ವಂಶಾವಳಿಗಳು ಇಂದಿಗೂ ಮಹತ್ವ
ವಾದವುಗಳಾಗಿವೆ. ಮೂರನೆಯ ಆವೃತ್ತಿಯ ನಂತರದ ಆವೃತ್ತಿಗಳಲ್ಲಿ ಈ
ವಂಶಾವಳಿಗಳ ಪಟ್ಟಿಯನ್ನು ಪ್ರಕಾಶಕರು ಅದೇಕೊ ತೆಗೆದುಹಾಕಿದರು.

ಮುಂದೆ ಮಾಧ್ವ ಆಚಾರ್ಯದ್ವಯರ ಬಗ್ಗೆ ಬರೆಯುವ ವೇಳೆಗೆ ರಾಜ
ಪುರೋಹಿತರಲ್ಲಿ ತಮ್ಮ ಸಂಶೋಧನ ಸಾಮರ್ಥ್ಯದ ಬಗ್ಗೆ ಸಾಕಷ್ಟು ಆತ್ಮ
ವಿಶ್ವಾಸ ಮೂಡಿತ್ತು. ಇಬ್ಬರದೂ ಚರಿತ್ರೆಗಳಲ್ಲಿ ಸಮಾನ ಹಾಗೂ ಪೂರಕ
ವಿಷಯಗಳು ಕಂಡುಬಂದುದರಿಂದ ಎರಡೂ ಚರಿತ್ರೆಗಳನ್ನು ಒಂದೇ ಪುಸ್ತಕದಲ್ಲಿ
ಹೇಳಿದರು. ಅವರಿಬ್ಬರ ಜೀವನದ ಬಗ್ಗೆ ಈಗಾಗಲೇ ಗೊತ್ತಿರುವ ಐತಿಹಾಸಿಕ
ಸಂಗತಿಗಳಿಗೆ ಹೆಚ್ಚಿನ ವಿಷಯ ಸೇರಿಸಿದರು. ಹಲವೊಂದು ಪೂರ್ವ ವಿಚಾರ
ಗಳನ್ನು ಅಲ್ಲಗಳೆದರು.

ಶ್ರೀ. ಯಾಜ್ಞವಲ್ಕ್ಯರ ಚರಿತ್ರೆಯು ಅವರ ಪ್ರಕಟಿತ ಪುಸ್ತಕಗಳಲ್ಲಿ
ಕೊನೆಯದು. ಮುಖ್ಯತಃ ಯಾಜ್ಞವಲ್ಕ್ಯರು ಶುಕ್ಲ ಹಾಗೂ ಕೃಷ್ಣ ಯಜು
ರ್ವೇದಗಳನ್ನು ನಿರ್ಮಿಸಿದವರು ಎಂಬುದನ್ನು ಸಾಧಾರವಾಗಿ ವಿವೇಚಿಸಲಾಗಿದೆ.
ಯಾಜ್ಞವಲ್ಕ್ಯರು ಯಜುರ್ವೇದವನ್ನು ಮುಖದಿಂದ ಹೊರಹಾಕಿದರೆಂದೂ
ಅದೇ ಮುಂದೆ ತೈತ್ತಿರಿ ಪಕ್ಷಿಯಿಂದ ಸೇವಿಸಲ್ಪಟ್ಟು ತೈತ್ತಿರೀಯ ಶಾಖೆಯ
ಹೆಸರಲ್ಲಿ ಉಳಿದುಕೊಂಡಿದೆಯೆಂದೂ ಇರುವ ಸನಾತನ ಕಥೆಗೆ ಸುಸಂಬದ್ಧವಾದ

ವಿವರಣೆಯನ್ನು ಕೊಟ್ಟಿದ್ದಾರೆ. ಹೀಗೆಯೇ ಯಾಜ್ಞವಲ್ಕ್ಯರು ಜನಕ, ಮೈತ್ರೇಯಿಗಳೊಡನೆ ನಡೆಸಿದ ಸಂಭಾಷಣೆಗಳಿಗೂ ಹೊಸ ಮೆರುಗನ್ನು ಕೊಟ್ಟಿದ್ದಾರೆ. ಒಟ್ಟಿನಲ್ಲಿ ಯಾಜ್ಞವಲ್ಕ್ಯರು ತಮ್ಮ ಕಾಲದಲ್ಲಿ, ಸಮಸ್ತ ವೇದಾಂಗಗಳ ವಿಷಯದಲ್ಲಿ ಆಧ್ಯಾತ್ಮಿಕ ಗುರುಸ್ಥಾನದಲ್ಲಿದ್ದರೆಂಬುದನ್ನು ತೋರಿಸಿದ್ದಾರೆ. ಪರಿಶಿಷ್ಟದಲ್ಲಿ ವೇದಗಳ ಎಲ್ಲ ಶಾಖೆಗಳ ಪರಿಚಯವನ್ನು ಕೊಟ್ಟಿದ್ದಾರೆ.

ಶ್ರೀ. ಯಾಜ್ಞವಲ್ಕ್ಯರ ಚರಿತ್ರೆಯೆಂದರೆ ರಾಜಪುರೋಹಿತರ ಸಂಶೋಧನದ ಪರಾಕಾಷ್ಠೆಯನ್ನೂ, ಸತ್ಯ ನಿಷ್ಠೆ ಹಾಗೂ ಸಮತೋಲನ ದೃಷ್ಟಿಯನ್ನೂ, ಹಳೆಯದನ್ನು ಹೊಸ ದೃಷ್ಟಿಯಿಂದ ವಿವೇಚಿಸುವ ಸಾಮರ್ಥ್ಯವನ್ನೂ ತೋರಿಸಿಕೊಡುವಂತಹದಾಗಿದೆ.

## ಲೇಖನಗಳು

ರಾಜಪುರೋಹಿತರ ಬಿಡಿ ಲೇಖನಗಳನ್ನು ಧಾರ್ಮಿಕ, ಐತಿಹಾಸಿಕ ಮತ್ತು ಸಾಹಿತ್ಯಿಕ ಎಂದು ಮೂರು ವಿಧವಾಗಿ ವಿಭಾಗಿಸಬಹುದು. ಇವುಗಳಲ್ಲಿ ಧಾರ್ಮಿಕ ಸಂಶೋಧನೆಯ ಮೊತ್ತವೇ ಹಿರಿದಾದುದಾಗಿದೆ. ಇತಿಹಾಸ ಪತ್ರವೊಂದನ್ನು ಬಿಟ್ಟರೆ, ಅವರ ಪ್ರಕಟಿತ ಗ್ರಂಥಗಳಾದರೂ ಧಾರ್ಮಿಕ ವಿಷಯಗಳೇ ಆಗಿವೆ.

ಅವರ ಧಾರ್ಮಿಕ ಸಂಶೋಧನೆಯು ಮುಖ್ಯವಾಗಿ ಒಂದು ಸೂತ್ರದ ಸುತ್ತು ಹೆಣೆದುಕೊಂಡಿತ್ತು. ಅಂದರೆ ಕಾಣ್ವಶಾಖೆಯ ಮೂಲ ಮತ್ತು ವಿಸ್ತಾರ ವಿಚಾರ. ಅವರ ಸಂಶೋಧನೆಯ ಬಹುಭಾಗವು ಕಾಣ್ವಾಯನದಲ್ಲಿಯೇ ಇದೆ. ಈಶಾವಾಸ್ಯ, ಬೃಹದಾರಣ್ಯಕ ಇವೆರಡು ಉಪನಿಷತ್ತುಗಳಲ್ಲಿ ಅದರ ಮೂಲವನ್ನು ಗುರುತಿಸಿ, ಶ್ರೀ ಯಾಜ್ಞವಲ್ಕ್ಯರ ಶಿಷ್ಯರಾದ ಕಣ್ವರಿಂದ ಇದು ಪ್ರತಿಪಾದಿತವಾದುದೆಂದು ಕಂಡುಕೊಂಡರು ಪ್ರಾಚೀನ ಕಾಲದಲ್ಲಿ ಕಾಣ್ವಶಾಖೀಯರುಸ್ಸಿ ಚಕ್ರವರ್ತಿಗಳೂ. ಮಂತ್ರಿಗಳೂ, ಸೇನಾಪತಿಗಳೂ, ಆಗಿದ್ದರೆಂಬುದನ್ನು ವಿವರಿಸಿದ್ದಾರೆ. ಕಾಣ್ವ ಶಾಖೀಯರ ಭೌಗೋಲಿಕ ವಿಸ್ತಾರವನ್ನೂ ಹೇಳಿದ್ದಾರೆ. ಕೊನೆಯ ವರುಷಗಳಲ್ಲಂತೂ ಅವರ ಲೇಖನಗಳು ಈ ವಿಷಯದ ಮೇಲೆಯೇ ಇದ್ದುವು. ಅವರು ತೀರಿಕೊಂಡ ಹಿಂದಿನ ತಿಂಗಳು 'ಕಾಣ್ವ ಮತ್ತು ಆಂಧ್ರಪ್ರಾಂತ' ಎಂಬ ತಮ್ಮ ಲೇಖವನ್ನು ಧಾರವಾಡದ

ಶ್ರೀ. ಜತಾರರಿಂದ ಭಾಷಾಂತರಿಸುವ ಉದ್ಯಮದಲ್ಲಿ ತೊಡಗಿದ್ದರು. ಅಷ್ಟೇಕೆ ಈಚಿನ ಅವರ ಹೆಚ್ಚಿನ ಬರವಣಿಗೆಗಳಲ್ಲಿ, ಪ್ರತಿಯೊಂದರಲ್ಲಿಯೂ ಕಾಣ್ವ ಮೂಲವನ್ನು ಹುಡುಕುವ ಪ್ರವೃತ್ತಿಯು ತಲೆದೋರಿ, ಅವರ ವಿಚಾರ ಧಾರೆಯು ಏಕದೃಷ್ಟೀಯವಾಯಿತೆ ಎಂದು ಶಂಕಿಸುವಂತಾಗಿದ್ದಿತು.

ಏನಿದ್ದರೂ ಕಾಣ್ವಶಾಖೆಗೆ ಶ್ರೀ. ರಾಜಪುರೋಹಿತರು ಸಲ್ಲಿಸಿದಷ್ಟು ಸೇವೆಯನ್ನು ಕರ್ನಾಟಕದಲ್ಲಿ ಇನ್ನಾರೂ ಸಲ್ಲಿಸಿಲ್ಲವೆಂದು ಹೇಳಬಹುದು. ಲೇಖನ ಕಾರ್ಯವಲ್ಲದೆ ಇತರ ರೀತಿಯಿಂದಲೂ ಅವರು ಶ್ರಮಿಸಿದರು. ಅಂತೆಯೆ ೧೯೪೭ ರಲ್ಲಿ ಚಿದಂಬರ ಜಯಂತಿಯ ಅಂಗವಾಗಿ ನಡೆದ ಕಾಣ್ವ ಶಾಖೆಯ ಬ್ರಾಹ್ಮಣ ಸಭೆಗೆ ಅವರು ಅಧ್ಯಕ್ಷರಾಗಿದ್ದರು.

ಈ ಕಾಣ್ವಾಯನಕ್ಕೆ ಪೂರಕವಾಗಿ ಬ್ರಾಹ್ಮಣರ ಸುಮಾರು ೩೬ ಒಳ ಭೇದಗಳ ಅಭ್ಯಾಸವನ್ನು ಅವರು ಮಾಡಿದ್ದರು! ಮುಖ್ಯವಾಗಿ ಮಾಧ್ಯಂದಿನ, ಕರ್ಹಾಡೆ, ಅರವತ್ತೊಕ್ಕಲು, ಸಹವಾಸೀ (ಸವ್ವಾಸೇ) ಈ ಜನದ ಬಗ್ಗೆ ಅವರು ಬೆಲೆಯುಳ್ಳ ಲೇಖನಗಳನ್ನು ಬರೆದಿದ್ದಾರೆ. ಅರವತ್ತೊಕ್ಕಲದವರು ತಾಳಗುಂದ, ಚಿಪಳೂಣ ಅಗ್ರಹಾರಗಳಲ್ಲಿ ನೆಲೆ ನಿಂತುದನ್ನು 'ಪ್ರಬುದ್ಧ ಕರ್ನಾಟಕ'ದ ಲೇಖದಲ್ಲಿ ವಿವರಿಸಿದ್ದಾರೆ. ಕರಹಟ ಅಗ್ರಹಾರದ ಮೇಲಿನ ಮರಾಠೀ ಲೇಖನದ ಉಲ್ಲೇಖವನ್ನು ಈ ಹಿಂದೆಯೆ ಮಾಡಿದ್ದಿದೆ. ಮಹಾರಾಷ್ಟ್ರದ ಸಾರ್ವಜನಿಕ ಜೀವನದಲ್ಲಿ ಮುಂದಾಳುಗಳಾಗಿರುವ ಅನೇಕ ಕರ್ಹಾಡೆ ಜನರು ತಮ್ಮ ಮತದ ಮೂಲ ಚರಿತ್ರೆಯನ್ನು ಈ ಮೂಲಕ ಅರಿತವರಾಗಿ, ರಾಜಪುರೋಹಿತರಿಗೆ ಅಭಿನಂದನ ಪತ್ರಗಳನ್ನು ಬರೆದುದನ್ನು ಈ ಹಿಂದೆ ಹೇಳಿದೆ.

ನಾಡಿನ ಇತಿಹಾಸದ ಲೇಖನಗಳನ್ನೀಗ ನೋಡೋಣ. ಅವುಗಳಲ್ಲಿ ರಕ್ಕಸ–ತಂಗಡಗಿ ರಣಭೂಮಿಯ ಶೋಧಕ್ಕೆ ವಿಶೇಷ ಮಹತ್ವವಿದೆ. ಮರಾಠೀ ಕನ್ನಡಗಳೆರಡರಲ್ಲೂ ದೀರ್ಘ ಪ್ರಬಂಧಗಳನ್ನು ಅವರು ಬರೆದಿದ್ದಾರೆ. ಕೇಸರಿಯಲ್ಲಿ ಬಂದ ಮಹಾರಾಷ್ಟ್ರ ಮತ್ತು ಕರ್ನಾಟಕಗಳ ಸಂಬಂಧವನ್ನು ವಿವರಿಸುವ ಲೇಖನ ಮಾಲೆಯಂತೂ ಕ್ರಾಂತಿಯನ್ನೆ ಉಂಟುಮಾಡಿತು. ವಿಠ್ಠಲ ಭಕ್ತಿಯ ಇತಿಹಾಸದ ಮೇಲಿನ ಬರೆಹವೂ ಇದೇ ನಡೆಯಲ್ಲಿ ಬರಬೇಕಾದುದೇ ಆಗಿದೆ.

ಇನ್ನೊಂದು ಮಹತ್ವದ ಸಂಶೋಧನೆಯೆಂದರೆ ವಿಕ್ರಮ ಶಕದ ಪ್ರಾರಂಭದ ದಿನವನ್ನು ಕಂಡುಹಿಡಿದುದು. ಅದರಂತೆ ಭೂಲೋಕಮಲ್ಲ, ಅಪರಾದಿತ್ಯ ಮುಂತಾದ ರಾಜರ ಜೀವನದ ಮೇಲೆ ಹೊಸ ಬೆಳಕನ್ನು ಚೆಲ್ಲಿದ್ದಾರೆ. ಎರಡರುನೂರರ ನಾಡು ಯಾವುದೆಂಬುದನ್ನು ವಿಶದೀಕರಿಸಿದ್ದಾರೆ. ಇದಲ್ಲದೆ ವಿದ್ಯಾರಣ್ಯರ ಮೇಲೆಯೂ, ಮಿಂಚಿದ ಮಹಿಳೆಯರಾದ ಹೆಳವನಕಟ್ಟೆ ಗಿರಿಯಮ್ಮ, ಕಿತ್ತೂರ ಚೆನ್ನಮ್ಮ, ತಿಮ್ಮಮ್ಮ ಇವರ ಬಗ್ಗೆಯೂ ಬರೆದ ಲೇಖನ ಗಳನ್ನು ಇಲ್ಲಿ ಉಲ್ಲೇಖಿಸಬಹುದು.

ಕನ್ನಡ ಕವಿಗಳಲ್ಲಿ ಹರಿಹರ, ರನ್ನ, ನಾಗವರ್ಮ, ರತ್ನಾಕರವರ್ಣಿ, ಕುಮಾರವ್ಯಾಸ, ಚೌಂಡರಸ, ಬಸವಣ್ಣ, ನೃಪತುಂಗ, ಕನಕದಾಸ ಮುಂತಾದವರ ಕಾಲ ಮತ್ತು ಮತಗಳ ನಿರ್ಣಯವನ್ನು ಮಾಡಿದ್ದಾರೆ. ಇತರ ಅಂಶಗಳನ್ನೂ ನಿವೇದಿಸಿದ್ದಾರೆ.

ಕೊನೆಯದಾಗಿ ಹೇಳಲೆಂದಿಟ್ಟುಕೊಂಡರೂ, ಅವರು ಸಂಶೋಧನ ಮಂಡಳ ಮತ್ತು ಸಂಶೋಧನ ಸಂಸ್ಥೆಯ ವತಿಯಿಂದ ತಿರುಗಾಡಿ ದೊರಕಿಸಿದ ಶಾಸನಗಳು, ತಾಡವಾಲೆ, ಹಸ್ತಲಿಖಿತ ಪ್ರತಿಗಳು, ನಾಣ್ಯಗಳು ಇವೂ ಅವರ ಸಂಶೋಧನ ಕಾರ್ಯದ ಮಹತ್ವದ ಅಂಶಗಳಾಗಿವೆ. ವಿಶೇಷತಃ ಸಂಶೋಧನ ಸಂಸ್ಥೆಗೆ ಒದಗಿಸಿಕೊಟ್ಟ ಕದಂಬ ೨ನೆಯ ಕೃಷ್ಣವರ್ಮನ ಅಕ್ಕಿಆಲೂರ ತಾಮ್ರ ಶಾಸನ, ಯಾದವ ಸಿಂಘಣನ ಹೆಂಡತಿ ಪತ್ತಿಬಿಟ್ಟ ವಿಷಯವಿರುವ ಹುಲಗೂರ ತಾಮ್ರ ಶಾಸನಗಳ ಮತ್ತು ಸಿರಗುಂಬಿ, ಇಟಗಿ ಮುಂತಾದ ಊರುಗಳಿಂದ ತಂದ ಪೂರ್ವ ಕಾಲದ ಹಂಚಿನ ಚೂರುಗಳು ಇವುಗಳ ಪ್ರತ್ಯೇಕ ಉಲ್ಲೇಖವನ್ನು ಮಾಡುವುದು ಅಗತ್ಯವಾಗಿದೆ.

## ಸತ್ಯಾನ್ವೇಷಣೆಯ ದೃಷ್ಟಿ

ಶ್ರೀ ರಾಜಪುರೋಹಿತರ ಸಮಗ್ರ ಸಂಶೋಧನೆಯ ಮುಖ್ಯ ಪ್ರೇರಣೆ ಯೆಂದರೆ ಸತ್ಯಾನ್ವೇಷಣೆಯ ದೃಷ್ಟಿ. ಒಂದು ವಿಷಯದ ಮೂಲವೆಲ್ಲಿದೆ; ಅದರ ನಿಜ ಸಂಗತಿ ಏನಿರಬೇಕು; ಇಂಥವರು ಈ ವಿಷಯದಲ್ಲಿ ಹೀಗೆ ಹೇಳಿ ದ್ದಾರೆ, ಇದು ಸರಿಯೆ; ಈ ಒಂದು ಪ್ರಮಾಣದಿಂದ ಹೊರಡುವ ಈ ಅಂಶದ ಸತ್ಯತೆಯನ್ನು ಸ್ಥಿರೀಕರಿಸುವ ಬೇರೆ ಆಧಾರಗಳು ಮತ್ತೆಲ್ಲಿವೆ? ಎಂಬೀ

ಬಗೆಯ ಯೋಚನೆ ನಿರಂತರವೂ ಅವರ ಚಿಂತನೆಯ ವಿಷಯವಾಗಿರುತ್ತಿದ್ದಿತು. ಇತಿಹಾಸ ವಿಷಯದಲ್ಲಿ ಸತ್ಯವನ್ನು ಅರಸಬೇಕಾಗುತ್ತದೆ. ಪ್ರಮಾಣಿಸಿ ನೋಡಬೇಕಾಗುತ್ತದೆ. ಇದ್ದಂತೆ ತೆಗೆದುಕೊಳ್ಳುವುದಿರುವದಿಲ್ಲ. ಸತ್ಯವಿದ್ದರೆಯೆ ಅದು ಇತಿಹಾಸವೆನಿಸಿಕೊಳ್ಳುತ್ತದೆ ಎಂಬ ಎಚ್ಚರವು ರಾಜಪುರೋಹಿತರಲ್ಲಿ ಸದಾ ಕಾಲ ಜಾಗೃತವಾಗಿರುತ್ತಿದ್ದಿತು.

ಆದರೂ ಅವರ ಕೆಲವು ಸಿದ್ಧಾಂತಗಳು ತಪ್ಪಾಗಿರಬಹುದು. ವಿದ್ವಜ್ಜನರ ಸಂದೇಹಕ್ಕೆ ಗುರಿಯಾಗಿರಬಹುದು. ಆದರೆ ಸತ್ಯವೆಂಬ ನವನೀತವನ್ನು ಕಡೆದು ತೆಗೆಯಬೇಕು; ತಮಗೆ ಹೊಳೆದ ಊಹೆಗೆ ಪ್ರಮಾಣವನ್ನು ಹುಡುಕಬೇಕು ಎಂಬುದು ಮಾತ್ರ ಸ್ವಭಾವ ಸಹಜವಾಗಿ ಅವರಲ್ಲಿದ್ದಿತು. ಮಧ್ವಾಚಾರ್ಯರ ಶಾಖಾ ನಿರ್ಣಯವನ್ನು ಒಂದಲ್ಲ, ಎಂಟು ಪ್ರಮಾಣಗಳನ್ನು ಕೊಟ್ಟು ತಮ್ಮ ಗ್ರಂಥಗಳಲ್ಲಿ ಹೇಳಿದ್ದರು. ಪುಸ್ತಕ ಪ್ರಕಟವಾದಮೇಲೆ ಮುಂದೆ ಒಂಬತ್ತನೆಯ ಪ್ರಮಾಣವೊಂದು ಸಿಕ್ಕಿತಾಗಿ, ಆ ಕೂಡಲೇ 'ಜಯ ಕರ್ನಾಟಕ' ದಲ್ಲಿ ಒಂದೇ ಒಂದು ಪುಟದ ಲೇಖವೆನ್ನುವಂತೆ ಅದನ್ನು ಪ್ರಕಟಿಸುವ ತತ್ಪರತೆಯನ್ನು ತೋರಿದರು.

ವಿದ್ವಾಂಸರಲ್ಲಿ ವ್ಯಾಸಂಗ ವೃತ್ತಿ ಇದೆಯೆಂದು ಹೇಳುವುದು ವಿಶೇಷ ಸಂಗತಿಯಾಗುವುದಿಲ್ಲ. ವ್ಯಾಸಂಗ ವೃತ್ತಿಯಿಲ್ಲದೆ ನಡೆಯುವುದಾದರೂ ಎಂತು? ಆದರೆ ತಮ್ಮ ವ್ಯಾಸಂಗ ಪೂರ್ತಿಗಾಗಿ ರಾಜಪುರೋಹಿತರು ಬಹಳಷ್ಟು ಕಷ್ಟ ಪಡಬೇಕಾಗುತ್ತಿದ್ದಿತು. ಜೊತೆಗೆ ಹೊಸ ಹೊಸ ವಿಷಯಗಳನ್ನು ಕಲಿಯಲೂ ಅವರು ಆತುರರಾಗಿರುತ್ತಿದ್ದರು. ೧೯೪೭ ರಲ್ಲಿ ಅಂದರೆ ಅವರ ಷಷ್ಟ್ಯಬ್ದಿ ಮುಗಿದ ನಂತರ 'ಸಂಖ್ಯಾ ಶಾಸ್ತ್ರ'ದ ಪ್ರಾರಂಭಿಕ ಅಭ್ಯಾಸವನ್ನು ಸುರುವು ಮಾಡಿದ್ದರಾಗಿ ಅವರ ದಿನಚರಿಯಿಂದ ತಿಳಿದುಬರುತ್ತದೆ. ಸಾಯುವ ಹಿಂದಿನ ವರುಷದ ಒಂದು ದಿನದ ದಿನಚರಿಯಲ್ಲಿ 'ಮಾಹಿಷ್ಮತಿಗೆ ಹೋಗಬೇಕು. ಆ ನಗರದ ಇತಿಹಾಸ ಐತಿಹ್ಯಗಳನ್ನು ತಿಳಿದುಕೊಂಡು ಬರಬೇಕು, ಬರುವಾಗ ನಾಗಪುರದಲ್ಲಿ ವಿದ್ವಜ್ಜನರ ಭೆಟ್ಟಿಯಾಗಿ ಕೆಲ ವಿಷಯಗಳನ್ನು ಚರ್ಚಿಸಬೇಕು' ಎಂದು ಸಂಕಲ್ಪಿಸಿಕೊಂಡಿದ್ದರ ದಾಖಲೆಯು ದೊರೆಯುತ್ತದೆ.

ಈ ಸತ್ಯಾನ್ವೇಷಣೆಯ ದೃಷ್ಟಿ ಮತ್ತು ಧೃಢವಾದ, ಆಳವಾದ ವ್ಯಾಸಂಗ ಇವುಗಳಿಂದಾಗಿ ರಾಜಪುರೋಹಿತರ ಬರವಣಿಗೆಯು ಇನ್ನೊಬ್ಬರ ವಿಚಾರವನ್ನು

ಖಂಡಿಸುವಲ್ಲಿ ಅತಿ ನಿಷ್ಠುರವಾಗಿರುತ್ತಿತ್ತು. ವೈಯಕ್ತಿಕ ದ್ವೇಷದಿಂದ ಹೀಗೆ ಮಾಡುತ್ತಿದ್ದಾರೆಯೆ ಎಂದು ಇನ್ನೊಬ್ಬರಿಗೆ ಅನಿಸಿರಬೇಕು! ಮಾತಿನಲ್ಲಿ, ನಡತೆಯಲ್ಲಿ ಇಷ್ಟು ಸೌಮ್ಯವಿರುವ ವ್ಯಕ್ತಿಯು ಇಷ್ಟೊಂದು ಕಟು ಮಾತುಗಳನ್ನು, ನಿಂದಾಜನಕ ನುಡಿಗಳನ್ನು ಬರೆಯಬಲ್ಲನೆ ಎಂದು ಸಂದೇಹ ಬರುತ್ತಿತ್ತು.

ಇದಕ್ಕೆ ಕಾರಣವೂ ಮೇಲಿನ ಮಾತಿನಲ್ಲಿಯೆ ಇದೆ. ತಮ್ಮ ಸತ್ಯ ನಿಷ್ಠೆ, ಹಾಗೂ ಅಧ್ಯಾಸದಿಂದ ಯಾವ ವಿಚಾರವು 'ಸೂರ್ಯ ಪ್ರಕಾಶದಷ್ಟು ಸ್ಪಷ್ಟವಿದೆ'ಯೆಂದು ತಮಗೆ ತೋರಿದೆಯೋ ಅದನ್ನು ಇನ್ನೊಬ್ಬರು ಅಲ್ಲಗಳೆದರೆ—ಸಂದೇಹಿಸಿದರೂ ಸಾಕು, ಸಿಡಿದೇಳುತ್ತಿದ್ದರು. ಈ ರೀತಿಯ ಬರವಣಿಗೆಗೆ ಮಹಾರಾಷ್ಟ್ರದ ಇತಿಹಾಸ ಸಂಶೋಧಕರಾದ ಶ್ರೀ. ರಾಜವಾಡೆಯವರ ಲೇಖನಿಯ ಪ್ರಭಾವವೂ ಕಾರಣವಾಗಿತ್ತೆನ್ನಬಹುದು. ಅವರದೂ ಹೀಗೆಯೇ ಖಂಡತುಂಡ ವಾಣಿ. ಇನ್ನೊಬ್ಬರನ್ನು ಖಂಡಿಸುವ ಸಂಧಿ ಸಿಕ್ಕಿತೆಂದರೆ ಅವರ ವಾದವನ್ನು ಬೇರು ಸಹಿತ ಕಿತ್ತೊಗೆಯಬೇಕು ಎಂಬಂತಹ ವೃತ್ತಿಯೆ ಅದರಲ್ಲಿ ಕಂಡುಬರುತ್ತದೆ.

ರಾಜಪುರೋಹಿತರ ಖಂಡನಾತ್ಮಕ ವಾದಸರಣಿಗೆ ಈ ಬಗೆಯ ಪರಂಪರೆಯು ಕಾರಣವಲ್ಲದೆ, ಇನ್ನೊಬ್ಬರ ಟೀಕೆ ಮಾಡುವ ಉದ್ದೇಶವು ಎಷ್ಟು ಮಾತ್ರಕ್ಕೂ ಇರಲಿಲ್ಲ. ಸ್ವಸಾಮರ್ಥ್ಯದ ವಿಶೇಷ ಹೆಗ್ಗಳಿಕೆಯೂ ಅದರಲ್ಲಿಲ್ಲ. 'ಯಾರ ಮನಸ್ಸನ್ನೂ ನೋಯಿಸುವ ಉದ್ದೇಶ ನನ್ನದಲ್ಲ' ಎಂಬುದಾಗಿ ರಾಜಪುರೋಹಿತರು ಭಾಷಣ ಮಾಡಬೇಕಾದ ಅನೇಕ ಪ್ರಸಂಗಗಳಲ್ಲಿ ಹೇಳಿದ್ದಾರೆ. ಮತ್ತು ತಮ್ಮ ಬರವಣಿಗೆಯ ರೀತಿಯಿಂದ ಸಂಬಂಧಪಟ್ಟವರಲ್ಲಿ ಅದೆಷ್ಟು ಅಪ್ರಿಯನಾಗಿದ್ದೇನೊ ಎಂದು ಹತ್ತಾರು ಬಾರಿ ನೊಂದುಕೊಂಡಿದ್ದುದೂ ಇದೆ.

ಇದಕ್ಕೆ ಇನ್ನೊಂದು ಕಾರಣವೆಂದರೆ ಕೈಕೊಂಡ ವಿಷಯದಲ್ಲಿ ತಮಗಿರುವ ಅತೀವ ತತ್ಪರತೆ ಮತ್ತು ಶ್ರದ್ಧೆ. ಈ ಸಂದರ್ಭದಲ್ಲಿ ಶ್ರೀ. ಡಿ. ವಿ. ಗುಂಡಪ್ಪನವರು, ಮಧ್ವಾಚಾರ್ಯರ ಚರಿತ್ರೆಯ ಬಗ್ಗೆ ರಾಜಪುರೋಹಿತರಿಗೆ ಬರೆದ ಪತ್ರದಲ್ಲಿ ಹೇಳಿದ ಮಾತುಗಳನ್ನು ಎತ್ತಿಕೊಡಬಹುದಾಗಿದೆ.

'ಶೋಧನ ಬುದ್ಧಿಯ ತೀಕ್ಷ್ಣ... ವ್ಯಾಪಾರದಲ್ಲಿ ನೀವು ಭಕ್ತಿ, ಶ್ರದ್ಧೆಗಳನ್ನು ತೋರಿಸುವವರಲ್ಲ. ಹಾಗೆಯೇ ಭಕ್ತಿ, ಶ್ರದ್ಧೆಗಳ ಆವೇಶದಲ್ಲಿ

ಶೋಧಕನಿಗಿರಬೇಕಾದ ಜಾಗರೂಕತೆಯನ್ನು ಬಿಡುವವರೂ ನೀವಲ್ಲ. ಹೀಗೆ ಆಪಾತತಃ ಸೇರಲಾಗದ ಎರಡು ಗುಣಗಳು ನಿಮ್ಮಲ್ಲಿ ಸೇರಿವೆ.'

ಎಷ್ಟೊಂದು ಸಮರ್ಪಕವಾಗಿದೆ ಈ ಮಾತು! ಯಾರ ವಿಷಯವಾಗಿ ರಾಜಪುರೋಹಿತರು ಮುಖ್ಯ ಸಂಶೋಧನೆಯನ್ನು ನಡೆಸಿದರೊ ಅಂಥ ಆಚಾರ್ಯ ಪುರುಷರಲ್ಲಿ, ಶ್ರದ್ಧೆ— ಭಕ್ತಿಗಿಂತ, ಶ್ರದ್ಧೆ ಓತಪ್ರೋತವಾಗಿದ್ದಿತು. ಆ ಶ್ರದ್ಧೆಯಿಂದಾಗಿಯು ಅವರು ಚರಿತ್ರ ರಚನೆಗೆ ಕೈ ಹಾಕಿದರು. ಆದರೆ ಇಂಥ ಪುಣ್ಯ ಪುರುಷರ ಜೀವನದಮೇಲೆ ದಂತ ಕಥೆ ಪವಾಡಗಳ ದೊಡ್ಡ ಹುತ್ತವೇ ಬೆಳೆದು ನಿಂತಿರುತ್ತದಷ್ಟೆ. ಇವು ಆ ಪೂಜ್ಯರ ಮಹೋನ್ನತಿಯನ್ನು ತೋರಿಸುವುದಕ್ಕೆಯೆ ಬೆಳೆದಿದ್ದರೂ, ಅದು ಸರಿಯಾದ ರೀತಿಯಲ್ಲ; ಕುರುಡರನ್ನು ಹಳ್ಳಕ್ಕೆ ನೂಕಿ, 'ಇಲ್ಲಿ ನೀರಿದೆ ಕುಡಿ' ಎಂದು ಹೇಳುವ ರೀತಿ ಅದು; ಎಂದು ರಾಜಪುರೋಹಿತರು ತಿಳಿದಿದ್ದರು. ಎಂತಲೇ ಅವರ ಜೀವನ ವೃತ್ತದ ಮೇಲಿನ ಮಾಲಿನ್ಯವನ್ನು ತೊಡೆದು ಹಾಕುವ ಉದ್ದೇಶದಿಂದಲೇ ಅವರು ಮತಾಚಾರ್ಯರ ಮೇಲಿನ ವ್ಯಾಸಂಗವನ್ನು ಕೈಕೊಂಡರು.

ರಾಜಪುರೋಹಿತರ ಸಂಶೋಧನ ಕಾರ್ಯದಲ್ಲಿ ಮುಖ್ಯವಾಗಿ ನೆರವಾದವುಗಳೆಂದರೆ ಸಂಸ್ಕೃತದ ಧರ್ಮ ಗ್ರಂಥಗಳು, ಶಿಲಾಶಾಸನಗಳು ಮತ್ತು ಐತಿಹ್ಯಗಳು. ಅವರು ಮೊದಲು ಒಂದು ವಿಷಯ ಅಥವಾ ಸಂದೇಹವನ್ನು ಕಣ್ಣುಮುಂದಿಟ್ಟುಕೊಂಡು ಸ್ವತಃ ಸ್ಥಳ ನಿರೀಕ್ಷಣೆ ಮಾಡಿಕೊಂಡು ಬರುತ್ತಿದ್ದರು. ಕಿತ್ತೂರು, ಕೊಪ್ಪಳ, ಉಡುಪಿ, ಮಳೆಬೆನ್ನೂರ, ಕರ್ಜಾಡ, ಚಿಪಳೂಣ, ಮಾಹಿಷ್ಮತಿ, ಇನ್ನೂ ಅನೇಕ ಊರುಗಳನ್ನು ಅವರು ಕಂಡುಬಂದದ್ದು ಅದಕ್ಕಾಗಿಯೇ. ಗ್ರಂಥಗಳ ಪರಿಶೀಲನೆಗೆಂದು ಧಾರವಾಡ, ಪುಣೆ ನಗರಗಳಲ್ಲಿಯ ಗ್ರಂಥ ಭಾಂಡಾರಗಳನ್ನು ಅವರು ಸಂದರ್ಶಿಸಿದರು. ಇದಲ್ಲದೆ ಅವರು ತಮ್ಮ ಸಂಶೋಧನೆಯ ವಿಷಯದಲ್ಲಿ ಬಲ್ಲವರೊಟ್ಟಿಗೆ ವಿಚಾರ ವಿನಿಮಯ ಮಾಡುತ್ತಿದ್ದರು. ಅಂಥವರಿಗೆ ಪತ್ರ ಬರೆದೂ ಅವರ ಅಭಿಪ್ರಾಯಗಳನ್ನು ಕೇಳಿಕೊಳ್ಳುತ್ತಿದ್ದರು. ಇವು ಮೂರೂ ಹಂತಗಳು ಮುಗಿದಮೇಲೆಯೇ ಅವರು ಬರವಣಿಗೆಗೆ ತೊಡಗುತ್ತಿದ್ದರು. ಜಯತೀರ್ಥರ ಬಗ್ಗೆ ಬರೆಯಬೇಕೆಂದು ವಿಷಯ ಸಂಗ್ರಹ ಮಾಡತೊಡಗಿದುದು ೧೯೧೭ ರಿಂದ, ಬರೆದುದು ೧೯೩೪ ರಲ್ಲಿ! ಅಂತೆಯೆ ಅವರ ಕೆಲವೊಂದು ಲೇಖನಗಳು ಟಿಪ್ಪಣಿ ರೂಪದಲ್ಲಿಯೆ ಉಳಿದಿವೆ.

ಅವರ ಸಂಶೋಧನ ಕಾರ್ಯವನ್ನು ಇಡಿಯಾಗಿ ಅವಲೋಕಿಸಿದರೆ, ಅದು ಮತೀಯವಾಗಿದೆ, ಎಂದು ಅನಿಸೀತು. ಹಾಗೆಂದ ಮಾತ್ರಕ್ಕೆ ಅವರಲ್ಲಿ ಯಾವುದೊಂದು ಮತದ ಬಗ್ಗೆ ಸಂಕುಚಿತ ಭಾವನೆ ಎಷ್ಟು ಮಾತ್ರಕ್ಕೂ ಇರಲಿಲ್ಲ. ಕಾಣ್ವಮತದ ಬಗ್ಗೆ ಸ್ವಲ್ಪ ವಿಶೇಷ ಕೆಲಸ ಮಾಡಿರಬಹುದು. ಆದರ ಜೊತೆಗೆ ಜೈನ ಮತೀಯರಲ್ಲಿಯೂ ಅವರಿಗೆ ಮನ್ನಣೆ ಇದ್ದಿತು. ಸಾಂಗಲಿ, ಶೇಡಬಾಳ ಮುಂತಾದ ಊರುಗಳಿಗೆ ಹೋದಾಗ ಅವರಿಗೆ ಜೈನ ಮತಸ್ಥರಲ್ಲಿಯ ತಾಡವಾಲೆಯ ಗ್ರಂಥಗಳು ಬೇಕಾದಹಾಗೆ ನೋಡಲು ದೊರೆಯುತ್ತಿದ್ದುವು. ಬಸವಣ್ಣನವರ ಸಮಾಧಿಯ ಸ್ಥಳ, ಹರಿಹರನ ಕಾಲ ನಿರ್ಣಯ ಇವುಗಳನ್ನು ವಿವರಿಸುವಾಗ ಸಹಿತ ಅಷ್ಟೇ ಶ್ರದ್ಧೆಯನ್ನು ಅವರು ತೋರಿದ್ದಾರೆ. ಅವರಿಗೆ ಮುಖ್ಯವಾದದ್ದು ಸಂಶೋಧನೆ, ಅದು ಯಾವುದೇ ಮತದ್ದಿರಲಿ. ತಮ್ಮ ಕರ್ತವ್ಯವೆಂಬುದಾಗಿ ಬಗೆದು ಆ ವಿಷಯದಲ್ಲಿ ದುಡಿದರು.

## ಇತರ ಕಾರ್ಯ

ಸಂಶೋಧನ ಲೇಖನ ಕಾರ್ಯದ ಜೊತೆಗೆ ರಾಜಪುರೋಹಿತರು ಸಾರ್ವಜನಿಕ ರಂಗದಲ್ಲಿಯೂ ಕೆಲಸಮಾಡಿದ್ದಾರೆ. ಧಾರವಾಡದಲ್ಲಿ ಸಾಮಾಜಿಕ ಜಾಗೃತಿಯಾಗುತ್ತಿದ್ದ ಕಾಲದಲ್ಲಿ ಅವರ ವಿಚಾರ ಮತ್ತು ಕಾರ್ಯ ಶಕ್ತಿಗಳು ಸ್ಫುರಣಗೊಂಡಿವೆಯಾದ್ದರಿಂದ ಆ ರಂಗದಲ್ಲಿ ಅವರು ಶ್ರಮಿಸಿದ್ದುದು ಸ್ವಾಭಾವಿಕವೇ ಆಗಿದೆ.

ಇತಿಹಾಸ ಸಂಶೋಧನ ಮಂಡಳವಂತೂ ಅವರ ಆದ್ಯ ಸಂಸ್ಥೆಯಾಗಿದ್ದಿತು. ಅದು ಮೃತಾವಸ್ಥೆಯಲ್ಲಿದ್ದ ಕಾಲಕ್ಕೂ ಅಷ್ಟೇ ಆಸ್ಥೆಯನ್ನು ಅವರು ಇಟ್ಟುಕೊಂಡಿದ್ದರು. ಬಹುಶಃ ಇತಿಹಾಸ ಸಂಶೋಧನ ಮಂಡಳ ಎನ್ನುವ ಸಂಸ್ಥೆಗಿಂತ, ಅದರ ಹಿಂದೆ ಇರುವ ಸಂಶೋಧನ ಕಾರ್ಯವು ಅವರ ಜೀವನ ಸರ್ವಸ್ವವಾಗಿದ್ದುದರಿಂದ ರಾಜಪುರೋಹಿತರು ಆ ಸಂಸ್ಥೆಗೆ ಅಂಟಿಕೊಂಡಿದ್ದರೆನ್ನಬಹುದು.

ಬೇರೆ ಸಂಸ್ಥೆಗಳೊಡನೆಯೂ ಅವರ ನಿಕಟ ಸಂಬಂಧವಿದ್ದಿತು. ತಾವಾಗಿ ಹುಟ್ಟುಹಾಕಿದ ಸಂಸ್ಥೆಯೆಂದರೆ ಸುರೇಶ್ವರಾಚಾರ್ಯರ ಉತ್ಸವ ಸಮಿತಿಯು. ಇದಲ್ಲದೆ ಸಾಹಿತ್ಯ ಪರಿಷತ್ತು, ವಿದ್ಯಾವರ್ಧಕ ಸಂಘ, ಬ್ರಾಹ್ಮಣ ಸಂಪದ್ವರ್ಧಿನಿ ಸಭೆ, ಕನ್ನಡಿಗರ ಕೂಟ, ಶಾಂತೇಶ ವಾಚನಾಲಯ, ಚಿದಂಬರ ಸೇವಾ

ಸಮಿತಿ— ಇನ್ನೂ ಹಲವಾರು ಸಂಸ್ಥೆಗಳ ಸದಸ್ಯರಾಗಿಯೂ ಪ್ರಸಂಗ ಬಂದಾಗ ಕಾರ್ಯೋನ್ಮುಖರಾಗಿಯೂ ಅವರು ಸೇವೆ ಸಲ್ಲಿಸಿದ್ದಾರೆ. ಪರಿಷತ್ತಿನ, ಏಕೀಕರಣ ಸಂಘದ ಪ್ರಚಾರಕರೆಂದೂ ಅವರು ಪ್ರಚಾರ ಕಾರ್ಯವನ್ನು ಕೈಕೊಂಡಿದ್ದಾರೆ. ಮಹಿಳಾ ವಿದ್ಯಾಲಯ, ವನಿತಾ ಸೇವಾ ಸಮಾಜ ಈ ಸಂಸ್ಥೆಗಳೊಡನೆಯೂ ಅವರು ಸಹಕರಿಸಿದ್ದಾರೆ. ಅದಕ್ಕೆ ಮೂಲತಃ ಕುಂಭಕೋಣಂ ದಂಪತಿಗಳ ಸ್ನೇಹವೇ ಕಾರಣವಾಗಿದ್ದಿತು.

ಪತ್ರಿಕಾ ಕರ್ತರಾಗಬೇಕು; ಒಂದು ಉತ್ತಮ ಪತ್ರಿಕೆ-ಪ್ರೆಸ್ಸನ್ನು ನಡೆಯಿಸಬೇಕು ಎಂಬ ಹಂಬಲವು ಅವರಿಗೆ ಬಹಳ ದಿನಗಳಿಂದಲೂ ಇದ್ದಿತು. ೧೯೨೨ ರಲ್ಲಿ 'ಲೋಕ ಬಂಧು' ಎಂಬ ಪತ್ರಿಕೆಯ ಸಂಪಾದಕರಾದರು. ಅದರಲ್ಲಿ 'ಕಾವ್ಯ ಶಾಸ್ತ್ರ ವಿನೋದ' ವನ್ನು ಕೊಡಬೇಕೆಂದು ಅವರ ಅಪೇಕ್ಷೆಯಾಗಿದ್ದಿತು. 'ಕನ್ನಡ ಮಾಸ ಪತ್ರಿಕೆಗಳ ಸದ್ಯಃಸ್ಥಿತಿಯು' ಎಂಬ ಅವರ ಹಳೆಯ ಲೇಖವು ವಿಷಯ ಸಂಗ್ರಹದ ದೃಷ್ಟಿಯಿಂದ ಉಪಯುಕ್ತವಾದದ್ದಾಗಿದೆ.

ಪತ್ರಿಕಾ ಪ್ರದರ್ಶನಗಳನ್ನು ಏರ್ಪಡಿಸುವಲ್ಲಿಯೂ ಅವರು ಆಸ್ಥೆಯಿಟ್ಟು ದುಡಿದರು. ಶಾಂತೇಶ ವಾಚನಾಲಯದ ನಾಡಹಬ್ಬ, ವಾರ್ಷಿಕೋತ್ಸವ ಪ್ರಸಂಗಗಳಲ್ಲಿ ರಾಜಪುರೋಹಿತರ ಈ ದಿಸೆಯ ಸೇವೆ ಇದ್ದೇ ಇರುತ್ತಿತ್ತು.

ಹೀಗೆ ಧಾರವಾಡದಲ್ಲಿ ಯಾವುದೇ ಸಾರ್ವಜನಿಕ ಚಟುವಟಿಕೆ ಇದ್ದರೂ ಅದರಲ್ಲಿ ಶ್ರೀ ರಾಜಪುರೋಹಿತರನ್ನು ಸೇರಿಸಿಕೊಳ್ಳುವುದೊಂದು ರೂಢಿಯೆ ಬಂದುಬಿಟ್ಟಿತ್ತು.



## ೩. ವ್ಯಕ್ತಿ

ಕಂದಿಹೋದ ಕೋಲು ಮುಖ, ಮಾಸಲು ಬಣ್ಣದ ಅರಿವೆ, ಬಾಗಿದ ಬೆನ್ನು, ದೂಳಡರಿದ ಪಾದಗಳು, ಕೈಯಲ್ಲೊಂದು ಬಡಿಗೆ ಹಿಡಿದುಕೊಂಡು ರಾಜಪುರೋಹಿತರು ಧಾರವಾಡದ ಬೀದಿಯಲ್ಲಿ— ಅಲ್ಲ, ಬೀದಿಯ ಒಂದು ಬದಿಗೆ ತಲೆ ತಗ್ಗಿಸಿಕೊಂಡು ನಡೆದು ಹೋಗುತ್ತಿದ್ದುದನ್ನು ತುಂಬಾ ಜನ ಕಂಡಿದ್ದಾರೆ.

ಅವರ ಮುಖವು ಕಂದಿಹೋಗಿತ್ತು. ಹೌದು ಏನೆಂದು ಅರಳಿರಬೇಕಿತ್ತು, ಅದು? ತಮ್ಮ ಕಾರ್ಯದಲ್ಲಿ ಜನತೆಯಿಂದಾಗಲಿ, ಮನೆ ಮಕ್ಕಳು, ಮನೆತನದ ಸ್ಥಿತಿಯಿಂದಾಗಲೀ ಮನ್ನಣೆ ದೊರೆತಿದ್ದರೆ ತಾನೆ ಅದು ಅರಳಬೇಕು? ಅವರ ಮಾಸಲು ಬಣ್ಣದ ಮಾಸಿದ ಬಟ್ಟೆ-ಬರೆಗಳು, ಭೌತಿಕ ಸುಖಗಳಲ್ಲಿ ಅವರ ಅನಾಸಕ್ತಿಯನ್ನೂ, ಕಡು ಬಡತನವನ್ನೂ ಒಡಮೂಡಿಸುವಂತಿದ್ದುವು. ಕುರ್ಚಿ-ಮೇಜುಗಳಿಲ್ಲದೆಯೆ ನೆಲದ ಮೇಲೆ ಕೂತುಕೊಂಡು ಬರೆಯುವಾಗ ತೊಡೆಯಮೇಲೆ ಇಟ್ಟುಕೊಳ್ಳುತ್ತಿದ್ದ, ದಿಂಬಿನ ಎತ್ತರವು ಎತ್ತ ಸಾಕಾಗಬೇಕು? ಎಂತಲೇ ಅವರ ಬೆನ್ನು ಬಾಗಿತ್ತು.

ಅವರ ದೂಳಡರಿದ ಪಾದಗಳು ಧಾರವಾಡದ ಹುಡಿಮಣ್ಣಿನಿಂದ ಹಾಗಾದುದಲ್ಲ. ಬದಲಾಗಿ ಕರ್ನಾಟಕದಲ್ಲಿಯ ನೂರಾರು ಹಳ್ಳಿಗಳಲ್ಲಿ ಅಲೆದಲೆದುದನ್ನೂ, ರಕ್ಕಸ-ತಂಗಡಗಿ ರಣಭೂಮಿಯಲ್ಲಿ ಓಡಾಡಿದುದನ್ನೂ ಥಟ್ಟನೆ ನೆನಪಿಗೆ ತಂದುಕೊಡುತ್ತಿದ್ದುವು. ಅವರ ದೇಹಕ್ಕೆ ಆಧಾರವಾದ ಆ ಹಳೆಯ ಬಡಿಗೆಯನ್ನು ಕಂಡಾಗ, ಹಳೆಯದನ್ನು ಕಡೆದು ಸತ್ಯವನ್ನು ಕಂಡುಹಿಡಿಯಬೇಕೆನ್ನುವ ಅವರ ಏಕನಿಷ್ಠವಾದ ಹಂಬಲವೇ ಅವರ ಜೀವನ ಮಾರ್ಗದಲ್ಲಿ ಊರುಗೋಲಾಗಿದ್ದುದನ್ನು ಸ್ಮರಿಸುವಂತಾಗುತ್ತಿತ್ತು.

ರಾಜಪುರೋಹಿತರದು ಎದ್ದುಕಾಣುವ ವ್ಯಕ್ತಿತ್ವವಲ್ಲ. ವೇಷಭೂಷಣದಲ್ಲಿಯೂ ಆಸ್ಥೆಯನ್ನು ತೋರಿದವರಲ್ಲ. ಮಾತು, ಕತೆ ಯಾವಾಗಲೂ ಸಂಶೋಧನದತ್ತ. ಇಲ್ಲವೆ ಅದಕ್ಕೆ ಸಂಬಂಧಿಸಿದ್ದನ್ನು ಬಿಟ್ಟು, ಬೇರೆ ಬೇರಾವುದೂ ಇರುತ್ತಿರಲಿಲ್ಲ. ವ್ಯಕ್ತಿಯಲ್ಲಿ ಕಾಣುವ ಅತಿಸಾಮಾನ್ಯ ಸರಳತನ, ಸೌಮ್ಯ

ಗಳು ಕಂಡುಬರುತ್ತಿದ್ದುವು. ಹೀಗೆ ಮೇಲುನೋಟಕ್ಕೆ ಆಕರ್ಷಕವೆನ್ನುವಂತ ಹದು ಏನೂ ಇರಲಿಲ್ಲ.

## ಬಡತನ

ರಾಜಪುರೋಹಿತರ ಅಂಥ ಸ್ಥಿತಿಗೆ ಬಡತನವು ಬಹುಮಟ್ಟಿಗೆ ಕಾರಣ ವಾಗಿತ್ತೆಂಬುದು ಅನೇಕರಿಗೆ ತಿಳಿದ ಮಾತೇ ಆಗಿದೆ. ಆದರ ವಿವರಣೆ ಇಲ್ಲಿ ಅನಗತ್ಯ. ' ಈ ದಾರಿದ್ರ್ಯದಾರುಣದಿಂದ ಎಷ್ಟು ಜನ ಬಳಲುತ್ತಲಿಲ್ಲ? ಅದ ರಲ್ಲಿ ರಾಜಪುರೋಹಿತರದೇನು ವಿಶೇಷ? ' ಎಂದು ಕೇಳುವವರೂ ಹಲವರಿರ ಬಹುದು. ಅದಕ್ಕೆ ಉತ್ತರವಿದೆ.

ದಾರಿದ್ರ್ಯವಿದ್ದ ಅನೇಕರಲ್ಲಿ ಅಲ್ಪವಾದರೂ ನಿಯಮಿತ ಗಳಿಕೆ ಎಂಬುದು ಇರಬಹುದು. ಇಲ್ಲವೆ ತಮ್ಮ ಮನೆ, ಕೈಯಲ್ಲಿನ ಕೆಲಸ ಇಷ್ಟಕ್ಕೆಯೆ ಅವರ ಮನಸ್ಸು ಮತ್ತು ವೃತ್ತಿಯು ತೊಡಗಿಕೊಂಡಿರುತ್ತದೆ. ರಾಜಪುರೋಹಿ ತರಿಗೋ— ನಿಯಮಿತವೆಂಬ ಮಾತು ಅಂತಿರಲಿ, ಗಳಿಕೆಯೆ ಇರಲಿಲ್ಲ. ಪ್ರಾಥಮಿಕ ಶಿಕ್ಷಕರಾಗಿಯಾದರೂ ಅವರು ತಮ್ಮ ಚರಿತಾರ್ಥವನ್ನು ಸಾಗಿಸ ಬಹುದಿತ್ತು. ಆದರೆ ಸ್ವತಂತ್ರ ಪ್ರವೃತ್ತಿಯವರಾದುದರಿಂದಲೂ, ತಮ್ಮ ಧ್ಯೇಯ ಸಾಧನೆಯಲ್ಲಿಯೆ ಹೆಚ್ಚು ವೇಳೆಯನ್ನು ಕಳೆಯಬೇಕೆನ್ನುವ ಆಸೆಯ- ನ್ನಿಟ್ಟುಕೊಂಡದ್ದರಿಂದಲೂ, ಅವರು ಅದಕ್ಕೆ ಅಂಟಿಕೊಳ್ಳಲಿಲ್ಲ. ಹೀಗಾಗಿ ಅವರು ತಮ್ಮ ದಿನಗಳನ್ನು ಅತಿ ಕಷ್ಟ ಸ್ಥಿತಿಯಲ್ಲಿ ಕಳೆದರು.

ಈ ಸ್ಥಿತಿಯಿಂದ ಅವರು ಧೈರ್ಯಗುಂದಲಿಲ್ಲ, ಧೃತಿಗೆಡಲಿಲ್ಲ. ತಮ್ಮ ಕಷ್ಟ ಪರಂಪರೆಯಿಂದ ನಿರ್ವಿಣ್ಣರಾಗದೇ ಅದನ್ನು ನಿಗ್ರಹಿಸಿಕೊಂಡರು. ಸಂಕಟವನ್ನು ಸಂವೇದನೆಯನ್ನಾಗಿ ಮಾಡಿಕೊಂಡರು. ಅಂಥ ಎದುರು ದಿಕ್ಕಿನ ಸೆಳವಿನಲ್ಲಿಯೂ ಈಜುತ್ತ ತಮ್ಮ ಕಾರ್ಯವನ್ನು ಮುಂದುವರಿಸಿದರು. ಎಂಬುದೇ ಅವರ, ಅವರ ದಾರಿದ್ರ್ಯ ಜೀವನದ ವಿಶೇಷ.

ಹಾಗೆಂದು ಸಂಸಾರವನ್ನು ಅವರು ಅಲಕ್ಷ್ಯ ಮಾಡಿದವರಲ್ಲ. ದಾಂಪ ತ್ಯದ ಆರಂಭದ ದಿನಗಳಲ್ಲಿ ನಾಳಿನ ಚಿಂತೆ ಏನು ಎಂದು ಯೋಚಿಸಿದ್ದುದುಂಟು. ಆದರೆ ಕಷ್ಟ ನಿಷ್ಠುರಗಳು ಕೈಮೀರಿ ಕವಿದಾಗ, ನಾಳಿನದರ ಚಿಂತೆಯನ್ನು ಮರೆತರೂ ಇಂದಿನದಕ್ಕೆ ಯೋಚಿಸದೇ ಇರಲಿಲ್ಲ. ಹಿಂದಿನದರ ಋಣ ಭಾರ

ವನ್ನು ಮರೆಯಲಿಲ್ಲ. ಸಂಸಾರ ನಿರ್ವಹಣೆಯತ್ತ ಅವರದು ಕರ್ತವ್ಯ ದೃಷ್ಟಿ ಮಾತ್ರವಾಗಿದ್ದಿತು.

ಏನಿದ್ದರೂ ತರುಣ ವಯಸ್ಸಿನಲ್ಲಿಯೆ ಸಂನ್ಯಾಸಾಶ್ರಮಕ್ಕೆ ಮನಸೋತವರವರು ! ಇದು ಐಹಿಕ ಸುಖ ಆರಾಮಗಳ ವಿಷಯದಲ್ಲಿ ಅವರ ನಿರ್ಲಿಪ್ತತೆಯನ್ನು ತೋರಿಸುತ್ತದೆಯಲ್ಲದೆ, ಸಂಸಾರ ಜೀವನದ ಬಗ್ಗೆ ತಿರಸ್ಕಾರವೆಂದಿಗೂ ಇರಲಿಲ್ಲ. ಅದೇಕೆ, ಅವರು ತಮ್ಮ ೪೫ ನೆಯ ವರ್ಷದವರಿರುವಾಗ, ಕಾಣ್ವ ಮಠವೊಂದರ ಅಧಿಪತಿಯಾಗುವುದಕ್ಕೆ ಕರೆ ಬಂದದ್ದನ್ನು ಅವರು ಸಂಸಾರದ ತಮ್ಮ ಕರ್ತವ್ಯದ ಕಲ್ಪನೆಯ ಒಂದೇ ಕಾರಣದಿಂದ ನಿರಾಕರಿಸಿದರು.

ಈ ವಿಷಯದಲ್ಲಿ ಅವರ ಮನೋವ್ಯಾಪಾರವನ್ನು ಅವರ ಶಬ್ದಗಳಲ್ಲಿಯೆ ಹೇಳುವುದಾದರೆ, ತಮಗೆ ಬ್ರಾಹ್ಮೀ ಸ್ಥಿತಿಯು ಪ್ರಾಪ್ತವಾಗಬೇಕೆಂದು ಅವರು ಆಶಿಸಿದ್ದರು. ಅವರ ತಿಳುವಳಿಕೆಯಲ್ಲಿ ಬ್ರಾಹ್ಮೀ ಸ್ಥಿತಿ ಎಂದರೆ ಸ್ಥಿತಪ್ರಜ್ಞತೆಯ ಪ್ರತಿರೂಪ. ಜೀವನ ರಂಗದ ಮಧ್ಯದಲ್ಲಿಯೆ ನಿಂತುಕೊಂಡು ಸುಖ ಮತ್ತು ದುಃಖಗಳನ್ನು ಸಮವಾಗಿ ಭೋಗಿಸುವುದು; ಆವೆರಡು ಅವಸ್ಥೆಗಳಲ್ಲಿಯೂ ತಮ್ಮ ಪ್ರಜ್ಞೆಯು ಅಸ್ಥಿರವಾಗದಂತೆ ನೋಡಿಕೊಳ್ಳುವುದು ಮತ್ತು ತಮ್ಮ ಕರ್ತವ್ಯ ಕರ್ಮವನ್ನು ಮಾಡುತ್ತ ಹೋಗುವುದೇ ಅವರ ಬ್ರಾಹ್ಮೀ ಸ್ಥಿತಿಯ ಕಲ್ಪನೆಯಾಗಿದ್ದಿತು. ಅವರ ೪೦ ವರ್ಷಗಳ ದಿನಚರಿಗಳ ನೂರಾರು ಪುಟಗಳಲ್ಲಿ ಬ್ರಾಹ್ಮೀ ಸ್ಥಿತಿಯ ಸಾಧನೆಯ ಬಗ್ಗೆ ಬರೆಯುತ್ತಿದ್ದರು. ಈ ಸ್ಥಿತಪ್ರಜ್ಞತೆಯನ್ನು ಬಹು ಮಟ್ಟಿಗೆ ಸಾಧಿಸಿಕೊಂಡರೆಂಬುದೇ ಅವರ ಜೀವನದ ವಿಶೇಷ.

ಈ ಬಡತನದ ಬೆನ್ನಿಗೇ ಸಾಗಿ ಬಂದುದು ಎಂದರೆ ಸಾಲಗಾರಿಕೆ. ಅದು ಬಿಡದ ಕರ್ಮ. ರಾಜಪುರೋಹಿತರು ತಮ್ಮ ಪರಿಚಯಸ್ಥರಲ್ಲಿ ಬಹು ಸಂಖ್ಯೆಯವರನ್ನು ಹಣ ಕೇಳದೇ ಬಿಟ್ಟಿಲ್ಲ ಎಂಬುದನ್ನು ಮೊದಲಿಗೇ ಒಪ್ಪಿಕೊಳ್ಳುವುದು ಲೇಸು. ರಾಜಪುರೋಹಿತರು ಸಾಲ ಮಾಡಿದ್ದು ತೀರ ಕಡಿಮೆ; ಕೈಗಡ ಮಾಡಿದ್ದೇ ಹೆಚ್ಚು. ಸಾಲವೆಂದರೆ ದೊಡ್ಡ ಮೊತ್ತ. ಇಂದಿನ ದಿನಗಳಲ್ಲಿ ಮರಳಿ ಮುಟ್ಟಿಸುವುದರ ಅನಿಯಮಿತತೆಯನ್ನು ಸೂಚಿಸುವಂತಹದು; ಅದರ ದುಸ್ಸಾಧ್ಯತೆಯನ್ನು ನೆನಪಿಗೆ ತರುವಂತಹದು. ರಾಜಪುರೋಹಿತರು ಪರರಿಂದ ತಂದ ಹಣವನ್ನು ತಿರುಗಿ ಕೊಡುವದನ್ನು ಗಮನದಲ್ಲಿ ಇಟ್ಟುಕೊಳ್ಳುತ್ತಿದ್ದ

ರಿಂದ, ಆ ಅರ್ಥದಲ್ಲಿಯೂ ಅವರು ಸಾಲ ಮಾಡಲಿಲ್ಲ. ಏನಿದ್ದರೂ ಅವರ ದಿನ-ಚರಿಗಳಲ್ಲಿ ಕೈಗಡ ತಂದ ಮತ್ತು ಮರಳಿ ಕೊಟ್ಟ ಅಸಂಖ್ಯ ಉಲ್ಲೇಖಗಳಿವೆ.

'ಸಾಲವನು ಕೊಂಬಾಗ ಹಾಲೋಗರುಂಡಂತೆ. ಸಾಲಿಗನು ಬಂದು ಕೇಳುವಾಗ ಕಿಬ್ಬದಿಯ ಕೀಲು ಮುರಿದಂತೆ' ಎಂದು ಸರ್ವಜ್ಞನು ಲೋಕದ ನಡೆವಳಿಕೆಯನ್ನು ಹೇಳಿದನು. ಆದರೆ ರಾಜಪುರೋಹಿತರಿಗೆ, ಕೈಗಡ ಕೇಳುವುದೆಂದರೆಯೇ ಕಿಬ್ಬದಿಯ ಕೀಲು ಮುರಿದಂತೆ ಎಂದೆನಿಸುತ್ತಿತ್ತು. ನಿರ್ವಾಹವಿಲ್ಲದೆ ಕೇಳುತ್ತಿದ್ದರು. ಹಾಗೆ ಕೇಳಿದಾಗ ಅದನ್ನು ಹೇಗೆ ತೀರಿಸಬೇಕು ಎಂಬ ವಿಚಾರ ಸದಾ ಅವರಲ್ಲಿರುತ್ತಿತ್ತು. ೧೦-೫-೧೯೩೫ರ ದಿನಚರಿಯಲ್ಲಿ—

'ಶ್ರೀ ........ ಅವರು ಊರಲ್ಲಿಲ್ಲದ್ದರಿಂದ ಅವರ ಮನೆಯ ಹೆಣ್ಣುಮಕ್ಕಳ ಕೈಯಲ್ಲಿ ೫ ರೂ. ಕೊಟ್ಟು ಕೈಗಡ ಬೇಬಾಕ ಮಾಡಿದೆನು' ಎಂದು ಬರೆದದ್ದಿದೆ. ಊರಲ್ಲಿಲ್ಲದಿದ್ದರೂ ಕೊಟ್ಟು ಬಂದರಂತೆ! ಋಣಮುಕ್ತರಾಗಬೇಕೆನ್ನುವ ಉತ್ಕಟತೆಗೆ ಬೇರೆ ನಿದರ್ಶನ ಬೇಕೆ? ಅವರ ಪಾಲಿಗೆ ಸಾಲವನ್ನು ತೀರಿಸಿದಾಗ ಹಾಲೋಗರುಂಡಂತೆ, ಎಂದು ಹೇಳಬಹುದಲ್ಲವೆ?

ಆದರೆ ಇವೆಲ್ಲಕ್ಕಿಂತ ರಾಜಪುರೋಹಿತರ ಜೀವನವು ಹಣ್ಣಾದುದು, ಅನಾಸ್ಥೆಯ ಮೂಲಕ. ಎಲ್ಲ ಕಡೆಯಿಂದಲೂ ಅನಾಸ್ಥೆ! ಬಡತನದ ಬವಣೆಯ ಹತ್ತು ಪಟ್ಟು ಅವರು ಈ ಅನಾಸ್ಥೆಯಿಂದ ಮಾನಸಿಕವಾಗಿ ಹತಾಶರಾಗಿದ್ದರು.

## ಸ್ವಭಾವ

ಆದರೂ ಎಷ್ಟೊಂದು ಸೌಜನ್ಯಯುಕ್ತವಾದ ಮಾತುಕತೆ ಅವರದು! ಯಾರಿಗೂ ಬಿರುನುಡಿಗಳನ್ನು ಆಡಿದವರಲ್ಲ. ಯಾರ ಬಗ್ಗೆಯೂ ದುರ್ಭಾವನೆಯನ್ನು ತಳೆದವರಲ್ಲ. ಒಮ್ಮೆ ಒಬ್ಬರಲ್ಲಿ ಕೈಗಡ ಕೇಳಿದರು. ಅವರು ಕೊಡಲಿಲ್ಲ. ಆದರೆ ಆ ವ್ಯಕ್ತಿಯ ಹೆಸರು ಮತ್ತು ರಕಮನ್ನು ಗಣಿಸಿದಾಗ ಆ ವ್ಯಕ್ತಿಯು ಬೇಕಂತೇ ಕೊಡಲಿಲ್ಲವೆಂಬುದು ಸ್ಪಷ್ಟವಾಗಿರುತ್ತದೆ. ಅಂಥ ಸಂದರ್ಭದಲ್ಲಿ ರಾಜಪುರೋಹಿತರು "ಶ್ರೀ ........ಅವರಿಗೆ ೧ ರೂ. ಕೈಗಡ ಕೇಳಿದೆನು." ಎಂದು ಬರೆದು ಮುಗಿಸುತ್ತಿದ್ದರಲ್ಲದೇ ಕೊಡಲಿಲ್ಲವೆಂದು ತಮ್ಮದೇ ಆದ ಖಾಸಗಿ ದಿನಚರಿಯಲ್ಲಿ ಕೂಡಾ ಬರೆಯುತ್ತಿರಲಿಲ್ಲ. ಇದು ಅವರ ಮನಸ-

ಶ್ನಿನ ಪ್ರತಿಕ್ರಿಯೆಯನ್ನು ತೋರಿಸುವಂತಹದಾಗಿದೆ. ಯಾರಾದರೂ ಭೆಟ್ಟಿಯ ವೇಳೆಯನ್ನು ಅವರಿಗೆ ಕೊಟ್ಟು, ಆ ವೇಳೆಗೆ ಮನೆಯಲ್ಲಿರದಿದ್ದರೆ ರಾಜಪುರೋಹಿತರು "ಶ್ರೀ........ ಅವರಲ್ಲಿಗೆ ಹೋಗಿದ್ದೆ. ಶ್ರಮವು ವ್ಯರ್ಥವಾಯಿತು." ಎಂದು ಬರೆದಿಡುತ್ತಿದ್ದರು.

ಅವರ ನಡತೆಯೂ ಅತ್ಯಂತ ಸೌಮ್ಯವಾದುದಿತ್ತು. ತಾನೊಬ್ಬ ದೊಡ್ಡ ಸಂಶೋಧಕರು, ತುಂಬಾ ಓದಿಕೊಂಡವರು ಎಂಬ ಹೆಮ್ಮೆಯು ಲವಲೇಶವೂ ಅವರ ಮಾತಿನಲ್ಲಿ ಗೋಚರವಾಗುತ್ತಿದ್ದಿಲ್ಲ. ಯಾವುದೇ ಸಂದರ್ಭವನ್ನು ತೆಗೆದುಕೊಳ್ಳಲಿ, ಅವರ ನಿಗರ್ವಿ ಹಾಗೂ ಸರಳ ಸ್ವಭಾವವು ಸ್ವಯಂ ವ್ಯಕ್ತವಾಗುತ್ತಿದ್ದಿತು.

ರಾಜಪುರೋಹಿತರು ಸ್ನೇಹಪರರಾಗಿದ್ದರು. ಅಂದರೆ ಸ್ನೇಹದ ದುರುಪಯೋಗವನ್ನು ಯಾವ ಕಾಲಕ್ಕೂ ಮಾಡಿಕೊಳ್ಳದ ಸ್ನೇಹಿತರಾಗಿದ್ದರು. ತಮ್ಮ ತಾಪತ್ರಯಗಳ ಭಾರವನ್ನು ಅವರು ತೋಡಿಕೊಂಡವರಲ್ಲ. ಒಬ್ಬರು ತಿರುಗಿ ಬಿದ್ದರೆ, ಇನ್ನೊಬ್ಬ ಸ್ನೇಹಿತರೆದುರು ತಪ್ಪಿಯೂ ಆಡಿಕೊಂಡವರಲ್ಲ. ವಿಶ್ವಾಸಯುಕ್ತ ಪರಿಚಯವಿದ್ದ ಮನೆಗಳಲ್ಲಿ ತಾವೇ ಹೇಳುತ್ತಿದ್ದರು, "ನಾನು ಇಲ್ಲಿಯೇ ಊಟ ಮಾಡುತ್ತೇನೆ" ಎಂದು. ಇಲ್ಲವೆ "ನನಗೆ ಬೇರೇನೂ ಬೇಡ, ಸ್ನಾನ ಮಾಡುವೆ. ಒಂದಿಷ್ಟು ಚಹಾ ಕೊಟ್ಟರೆ ಸಾಕು" ಎಂದು ಹೇಳುವರು. ಭಿಡೆಯೂ ಇಲ್ಲದ, ಆದರೆ ಭಾರವೂ ಅಲ್ಲದ ಮಾತುಗಳಿವು. 'ಒಳಗೊಂದು ಹೊರಗೊಂದು' ಎಂಬ ಶಬ್ದಗಳ ಪರಿಚಯವೇ ಅವರ ವೃತ್ತಿಗೆ ಅರಿದಾಗಿದ್ದಿತು. ಅನ್ಯಾಯವನ್ನು, ಅನೈತಿಕವನ್ನು, ಅನೃತವನ್ನು ಅವರು ಕನಸಿನಲ್ಲಿಯೂ ಎಣಿಸಿದವರಲ್ಲ.

## ತಿರುಗಾಟ— ದಿನಚರಿ

ರಾಜಪುರೋಹಿತರ ವ್ಯಕ್ತಿತ್ವವನ್ನು ನೆನೆದಾಗ ನನಗೆ ಅವರ ತಿರುಗಾಟದ ಕಲ್ಪನೆ ತಪ್ಪದೇ ಬರುತ್ತದೆ. ಅದೇನು ಅವರ ಸಂಚಾರ! ವರುಷದಲ್ಲಿ ೮-೯ ತಿಂಗಳು ಪ್ರವಾಸದಲ್ಲಿಯೇ ಕಳೆಯುತ್ತಿದ್ದರೆಂದು ಹೇಳಬಹುದು. ಅವರ ಪ್ರವಾಸ ಕಾರ್ಯವು ಸಂಶೋಧನಕ್ಕಾಗಿಯೆ ಇರುತ್ತಿತ್ತು. ಪ್ರವಾಸದಿಂದ ರಾಜಪುರೋಹಿತರು ಅಖಂಡ ಪ್ರಯೋಜನವನ್ನು ಪಡೆದರು. ಅದರ ಮೂಲಕ

ಪರಿಚಯವಾದ ಜನರ ಪರಿಚಯ, ಅವರು ಹೋಗಿದ್ದ ಕರ್ನಾಟಕ-ಮಹಾರಾಷ್ಟ್ರಗಳ ಊರುಗಳ ಸಂಖ್ಯೆ ಇವು ನಾವಿಡಗಟ್ಟಲೆ ಇವೆ.

ತಿರುಗಾಟ! ಪ್ರಾರ್ಥನೆಯ ಉಪಯೋಗವನ್ನು ಗಾಂಧೀಜಿಯಷ್ಟು ಇನ್ನಾರೂ ಮಾಡಿಕೊಳ್ಳಲಿಲ್ಲ; ಅಲ್ಲವೆ? ಹಾಗೆಯೆ ರಾಜಪುರೋಹಿತರಷ್ಟು ತಿರುಗಾಟದ ಉಪಯೋಗವನ್ನು ಇನ್ನಾರೂ ಮಾಡಿಕೊಂಡಿರಲಿಕ್ಕಿಲ್ಲ.

ಧಾರವಾಡದಲ್ಲಿದ್ದಾಗಲೂ ಅವರು ತುಂಬ ಓಡಾಡುತ್ತಿದ್ದರು. ಮನೆಯಿಂದ ಮುದಿಹಾಳಕ್ಕೆ, ಅಲ್ಲಿಂದ ವನಿತಾ ಸೇವಾ ಸಮಾಜಕ್ಕೆ, ಸಮಾಜದಿಂದ ಮಾಳಮಡ್ಡಿಗೆ, ಅಲ್ಲಿಂದ ಮನೆ. ಈ ತಿರುಗಾಟದಲ್ಲಿಯೆ ಅವರು ತಮ್ಮ ವಿಚಾರವನ್ನು ಸಂದೇಹವನ್ನು ಒರೆಗಲ್ಲಿಗೆ ಹಚ್ಚುತ್ತಿದ್ದರು! ಮನೆಯಲ್ಲಿ ಶಾಲೆಗೆ ಹೋಗುವ ಮಗನು ಒಂದು ಲೆಕ್ಕವನ್ನು ಕೇಳಿದನು. ಬರಲಿಲ್ಲ. ಸರಿ, ರಾಜಪುರೋಹಿತರು ತಮ್ಮ ಬೆಳಗಿನ ತಿರುಗಾಟದಲ್ಲಿ ಅದನ್ನು ಬಿಡಿಸುವ ವಿಧಾನವನ್ನು ಕಂಡು ಹಿಡಿದರು. ಹತ್ತು ಜನರು ಹಕ್ಕಿನಿಂದ ತಿರುಗಾಡುವ ಬೀದಿಯಲ್ಲಿ ಇವರು ದೊರಕಿಸಿಕೊಂಡಿದ್ದ ಏಕಾಗ್ರತೆಯ ರೀತಿಯು ಅದೆಂಥದೋ!

ತಿರುಗಾಟದಷ್ಟೇ ಅವರು ಜೀವನದಲ್ಲಿ ನೆಚ್ಚಿಕೊಂಡದ್ದು ಎಂದರೆ ದಿನಚರಿ. ೧೯೧೩ರ ಸುಮಾರಿಗೆ ಅವರು ದಿನಚರಿಗಳನ್ನು ಬರೆಯಲು ಪ್ರಾರಂಭಿಸಿರಬೇಕು. ಅಲ್ಲಿಂದ ತಮ್ಮ ಕೊನೆಗಾಲದ ವರೆಗೂ (೭-೮-೫೩) ಅವರು ದಿನಚರಿಯನ್ನು ಬರೆದರು. ಆ ಬರವಣಿಗೆಯ ರೀತಿ ಅವರದೇ. ಅದು ನಿರ್ದೇಶನ ರೂಪವಾಗಿರುತ್ತಿತ್ತಲ್ಲದೆ, ಟಿಪ್ಪಣಿ ರೂಪದಲ್ಲಲ್ಲ. ದಿನಚರಿಯಲ್ಲಿ ತಾವಿದ್ದ ಊರು, ಭೆಟ್ಟಿಯಾದವರ ಹೆಸರು, ಓದಿದ ಪುಸ್ತಕ, ತಂದ ಸಾಮಾನುಗಳ ವಿವರ, ಕೈಗಡ ವಿಚಾರ ಇವುಗಳ ಉಲ್ಲೇಖವಿರುತ್ತಿತ್ತು. ಜೊತೆಗೆ ಆಗಬೇಕಾದ ಮತ್ತು ಆದ ಕಾರ್ಯಗಳನ್ನು ಅವರು 'ನಾಳಿನ ಗೃಹಕೃತ್ಯಗಳು' 'ಸದ್ಯದ ಕೆಲಸಗಳು' 'ಈ ವರ್ಷದ ಫಲಗಳು' ಎಂಬುದಾಗಿ ಬರೆದಿಡುತ್ತಿದ್ದರು. ನಸ್ಯ ತಂದುದೂ, ಬಟ್ಟೆ ಒಗೆದುಕೊಂಡುದೂ, ಇಂಥವರಲ್ಲಿ ಚಹಾ ಕುಡಿದುದೂ— ಹೀಗೆ ಅತಿ ಸಣ್ಣ-ಪುಟ್ಟ ಕೆಲಸಗಳನ್ನೂ ಬರೆದಿಡುವಂಥ ರಾಜಪುರೋಹಿತರ ಮನೋಬಗೆಯು ವಿಶಿಷ್ಟವಾದುದಾಗಿದೆ. ಆದರೂ ಇಷ್ಟು ವರ್ಷಗಳ ವರೆಗೆ ಅವ್ಯಾಹತವಾಗಿ ದಿನಚರಿಯನ್ನು ಬರೆದಿಟ್ಟಂತಹ ವ್ಯಕ್ತಿಗಳು ನಮ್ಮಲ್ಲಿ ಕಡಿಮೆ ಎಂದೇ ಹೇಳಬಹುದು.

# ಕನ್ನಡ ಪ್ರೇಮ

ಕನ್ನಡಿಗರಲ್ಲಿ ರಾಜಪುರೋಹಿತರ ವಿಶ್ವಾಸವು ಗಾಢವಾಗಿರದಿದ್ದರೂ, ಕನ್ನಡ ಪ್ರೇಮವು ಮಾತ್ರ ಅವರಲ್ಲಿ ಆಳವಾಗಿ ಇದ್ದಿತೆಂಬುದನ್ನು ಬೇರೆ ಹೇಳುವುದು ಬೇಡ. ಅದಕ್ಕೆ ನಿದರ್ಶನಗಳನ್ನು ಮಾತ್ರ ಇಲ್ಲಿ ಕೊಡಬಹುದಾಗಿದೆ. ಈ ಕನ್ನಡ ಪ್ರೀತಿಯ ಉತ್ಕಟತೆಯೇ ಅವರ 'ಕೇಸರೀ' ಲೇಖನಗಳಿಗೆ ಕಾರಣವಾಯಿತು. ಅದೇ ಕಾಲದಲ್ಲಿ, ಕಡಪಾ ರಾಘವೇಂದ್ರರಾಯರು 'ಧಾರವಾಡದಲ್ಲಿ ಭಾಷಣ ಮಾಡುವ ಮುಖಂಡರು ಕನ್ನಡದಲ್ಲಿಯೇ ಭಾಷಣ ಮಾಡಬೇಕು' ಎಂಬ ಕೂಗನ್ನೆಬ್ಬಿಸಿದರು. ಅದು ಯಶಸ್ವಿಯಾಗುವಂತೆ ಚಳುವಳಿ ಮುಂದುವರಿಸಿದವರಲ್ಲಿ ಶ್ರೀ. ರಾಜಪುರೋಹಿತರು ಪ್ರಮುಖರು.

ಇತಿಹಾಸ ಸಂಶೋಧನ ಕಾರ್ಯದಲ್ಲಿಯೂ ಕನ್ನಡವೇ ಪ್ರೇರಕ ಶಕ್ತಿಯಾಗಿದ್ದಿತು. ಹಳ್ಳಿ ಹಳ್ಳಿಗಳಲ್ಲಿ ಬೆಳಗಿನ ಹಾಂಗ ನೆವ ಮಾಡಿಕೊಂಡು ಹೊರಬಿದ್ದು, ಕಲ್ಲು, ಮುಳ್ಳು ಹೇಸಿಗೆಗಳನ್ನು ದಾಟಿ, ಒಣಗಲೆಂದು ಬಡಿದಿದ್ದ ಕುಳ್ಳುಗಳನ್ನು ತೆಗೆದುಹಾಕಿ ಶಾಸನಗಳನ್ನು ಓದಿದರು. ಯಾರೊಬ್ಬರ ಹಳ್ಳಿಯ ಹಿತ್ತಿಲಿನಲ್ಲಿ ಕೈ ತೊಳೆಯ ಹೋದಾಗಲೂ ಅವರು ಬರಹದ ಕಲ್ಲುಗಳು ಸಿಗುತ್ತವೆಯೇ ಎಂದು ಕಣ್ಣು ಹಾಯಿಸುತ್ತಿದ್ದರು. ಹಾಗೆ ಒಂದೆರಡು ಸಂದರ್ಭಗಳಲ್ಲಿ ಸಿಕ್ಕದ್ದೂ ಇದೆ!

---

# ೪. ಫಲಶ್ರುತಿ

ತಮ್ಮ ಜೀವಿತ ಕಾಲದಲ್ಲಿ ಕನ್ನಡಕ್ಕೆ ಸಾಕಷ್ಟು ಸೇವೆ ಸಲ್ಲಿಸಿ
ಶ್ರೀ ರಾಜಪುರೋಹಿತರು ವೈಯಕ್ತಿಕವಾಗಿ ದುರಂತ ಜೀವನವನ್ನು ನಡೆಸು
ಪ್ರಸಂಗ ಬಂದಿತೆಂಬುದನ್ನು ಬೇರೆ ಹೇಳಬೇಕಿಲ್ಲ. ಆದರೆ ಈ ಪರಿಸ್ಥಿತಿ
ಯಾರು ಹೊಣೆ ? ತಪ್ಪು ಎಲ್ಲಿದೆ ?

ತಮ್ಮ ಪರಿಸ್ಥಿತಿ ಹಾಗೂ ಸಂಶೋಧನ ಕಾರ್ಯತತ್ಪರತೆಗಳ ಮೂಲ
ಅವರು ಸಂಸಾರ ನಿರ್ವಹಣೆಯಲ್ಲಿ ಅವರು ಅಯಶಸ್ವಿಗಳಾದಾಗ, ಮನೆ ಜನರ
ಅವರ ಸುಖಶಾಂತಿಗಳನ್ನು ನೋಡಿಕೊಳ್ಳದಿದ್ದರೆ, ಅದರಲ್ಲಿ ಮನೆಯವರ ತಪ್ಪೆ
ನಿದೆ, ಎಂದು ಕೇಳಬೇಕಾಗುತ್ತದೆ. ಎಂಟಾಣೆಯ ತನಕ ಕೈಗಡ ಕೇಳು
ಈ ದರಿದ್ರ ವ್ಯಕ್ತಿಗೆ ನಾವು ಏನೆಂದು ಮರ್ಯಾದೆ ಕೊಡಬೇಕು ಎಂದು ಊ
ಜನರಿಗೆ ಅನಿಸಿದರೆ ಅದೂ ಅಪರಾಧವೆಂದು ತಿಳಿಯಬೇಕೆ ? ಇತ್ತ ಸಂಶೋಧನ
ಕಾರ್ಯವೆಂದರೆ ಜನ ಸಾಮಾನ್ಯರ ವಿಶೇಷ ಗಮನವು ಹೊರಳುವಷ್ಟು ನಮ್ಮ
ಸಂಸ್ಕಾರ ಅರಳಿದೆಯೆ ಎಂದೂ ಯೋಚಿಸಬೇಕಾದೀತು ಇನ್ನು ರಾಜಪುರೋಹಿ
ತರು ಈ ಸಂಶೋಧನದ ಹುಚ್ಚನ್ನು ಮೈಮೇಲೆ ಹಾಕಿಕೊಂಡು ಅಖಂಡ
ಆಯುಷ್ಯ ಪರ್ಯಂತ ಶ್ರಮಿಸಿದುದೇ ಒಂದು ಪ್ರಮಾದವಾಯಿತೆ ? ಅಥವಾ
ಅವರು ಈ ೨೦ ನೆಯ ಶತಮಾನದ ಪೂರ್ವಾರ್ಧದಲ್ಲಿ ಬದುಕಿರದೆ ನೂರ
ವರ್ಷದ ನಂತರ ಹುಟ್ಟಿ ಬಂದಿದ್ದರೆ ನೆಟ್ಟಗಿತ್ತೆ ? ಈ ಕೊನೆಯ ಮಾತೇ ಹೆಚ್ಚು
ಸಮಂಜಸವೆನಿಸುತ್ತದೆ.

ಒಬ್ಬ ರಾಜಪುರೋಹಿತರ ಜೀವನ ಈ ರೀತಿ ಒಡ್ಡಾಡಿದ್ದರೆ ಅಷ್ಟು
ಮಹತ್ವವಿರಲಿಲ್ಲ. ಆದರೆ ಕರ್ನಾಟಕದಲ್ಲಿ ಇನ್ನೂ ಹಲವು ರಾಜಪುರೋಹಿತ
ರಿದ್ದಾರೆ. ಅಂಥವರು ಸಂಶೋಧನ ರಂಗದಲ್ಲಷ್ಟೇ ಅಲ್ಲ, ಸಾಹಿತ್ಯಿಕ ರಂಗದಲ್ಲಿ
ದ್ದಾರೆ. ಸಮಾಜ ಸೇವೆಯಲ್ಲಿ ನಿರತರಾದವರಿದ್ದಾರೆ. ಈ ಮಾಲಿಕೆಯಲ್ಲಿ ಬರುವ
ರೆಲ್ಲರನ್ನೂ 'ಸಂತ್ರಸ್ತ'ರೆಂಬ ಪದದಿಂದ ಒಂದುಗೂಡಿಸಬಹುದು. ಇಂತಹರು
ಯಾವುದೋ ಒಂದು ಅಂತಃ ಶಕ್ತಿಯಿಂದ ಪ್ರೇರಿತರಾಗಿ ತಮ್ಮದೆನ್ನುವ ಸು
ನೋಡದೆ, ಒಂದು ಧ್ಯೇಯದತ್ತ ಸಾಗಿ ಆ ರಂಗದಲ್ಲಿ ಇಡೀ ಆಯುಷ್ಯವನ್ನೆ

ಸವೆಯುತ್ತಿರುತ್ತಾರೆ. ಇಂತಹರಿಗೆ ಬ್ಯಾಂಕಿನಲ್ಲಿ ದುಡ್ಡು ಹಾಕುವುದು ಬೇಕಿಲ್ಲ, ಸಂಪತ್ತನ್ನು ಗಳಿಸಿ ಐಹಿಕ ಸುಖ ಸಾಧನೆಗಳನ್ನು ಹೆಚ್ಚಾಗಿ ಪಡೆಯುವ ಉದ್ದೇಶ ಅವರದಲ್ಲ. ಅವರಿಗೆ ಬೇಕಾದುದು ಸಾಮಾನ್ಯ ಜೀವನ, ಅತ್ಯಗತ್ಯದ ಪೂರೈಕೆ. ಯಾರ ಶ್ರಮ-ಶಕ್ತಿಗಳು ನಾಡಿನ ಏಳ್ಗೆಗಾಗಿ ಉಪಯೋಗವಾಗುವವೋ ಅವರಿಗೆ ಅನ್ನವಾದರೂ ದೊರೆಯುವುದು ಹೆಚ್ಚೆ?

ನಿಜವೆಂದರೆ ಇಂಥ ವ್ಯಕ್ತಿಗಳ ಕಾರ್ಯದ ಮಹತ್ವವನ್ನು ಅರಿತುಕೊಂಡು ಗೌರವಿಸುವುದಕ್ಕೆ ಮುಖ್ಯತಃ ನಮ್ಮಲ್ಲಿ ಒಂದು ಬಗೆಯ ಸಂಸ್ಕಾರ ಬೇಕಾಗುತ್ತದೆ. ಅವರು ಹಾಗೆ ಇರುವುದು ಪ್ರಕೃತಿ; ಅವರನ್ನು ಆದರಿಸುವುದು ಸಂಸ್ಕೃತಿ. ಇಂಥ ವ್ಯಕ್ತಿಗಳಿಗೆ ಜನತೆಯಿಂದ ಪುರಸ್ಕಾರದ ಮನ್ನಣೆಯಾದರೂ ದೊರೆಯುವುದು ಬೇಡವೆ? ಅವರು ಹೊಗಳಿಕೆಯನ್ನು ಅಪೇಕ್ಷಿಸುವುದಿಲ್ಲ. ತಾವು ಕೂಗಿದ ಧ್ವನಿಗೆ, ಹತ್ತಲ್ಲ, ಒಂದು ದಿಕ್ಕಿನಿಂದಾದರೂ ಮರುದನಿ ಕೇಳಿದರೆ, ಅಷ್ಟೇ ಅವರಿಗೆ ಮುಂದಿನ ಕಾರ್ಯಕ್ಕೆ ಪ್ರೋತ್ಸಾಹನಿಯಾಗುತ್ತದೆ. ಬಡತನ ಮತ್ತು ಅನಾಸ್ಥೆ ! ಇವೆರಡೂ ಇಲ್ಲದಂತಾದರೆ ರಾಜಪುರೋಹಿತರಂಥ, ಸಂತ್ರಸ್ತರಿಂದ, ನಾಡಿನ ಕಾರಣ ಪುರುಷರಿಂದ ಇನ್ನೂ ಹೆಚ್ಚಿನ ಕಾರ್ಯವಾಗುವುದು ಸಾಧ್ಯವಿದೆ. ಹಾಗಾಗಬೇಕು.

## ಸ್ಮಾರಕ

ಈ ಹಿನ್ನೆಲೆಯಲ್ಲಿ ಶ್ರೀ. ರಾಜಪುರೋಹಿತರಿಗೆ ಯಾವ ರೀತಿಯಿಂದ ಸಾಮಾಜಿಕ ಸ್ಮಾರಕವಾಗಬೇಕು ಎಂದು ಯೋಚಿಸಬಹುದಾಗಿದೆ. ಅವರಿಗೆ ನಾವು ಎರಡು ಬಗೆಯಲ್ಲಿ ಯೋಗ್ಯ ಗೌರವವನ್ನು ಸಲ್ಲಿಸುವುದು ಸಾಧ್ಯವಿದೆ. ಒಂದು, ಅವರು ಇಟ್ಟುಕೊಂಡ ಧ್ಯೇಯದ ಕಾರ್ಯಗಳನ್ನು ಮುಂದುವರಿಸುವುದು. ಇನ್ನೊಂದು ಅವರ ಸಮಗ್ರ ಸಂಶೋಧನ ಕಾರ್ಯವನ್ನು ಗ್ರಂಥ ರೂಪದಲ್ಲಿ ತರುವುದು.

ಅವರ ಜೀವನ ಕಾಲದಲ್ಲಿ ಫಲಿಸಲಾಗದ ಒಂದು ದೊಡ್ಡ ಕಾರ್ಯ ಹಾಗೇ ಉಳಿದಿದೆ. ಅದೆಂದರೆ ಕರ್ನಾಟಕದ ಸಮಗ್ರ ಇತಿಹಾಸವನ್ನು ಹತ್ತಾರು ಸಂಪುಟಗಳಲ್ಲಿ ಬರೆಯಿಸುವುದು. ಅದರಂತೆ ಇತಿಹಾಸ ಸಂಶೋಧನ ಮಂಡಳವು ಅವರ ನೆಚ್ಚಿನ ಸಂಸ್ಥೆಯಾಗಿತ್ತಷ್ಟೆ. ಆ ಮಂಡಳವು ದೊಡ್ಡ ಸಂಸ್ಥೆಯಾಗಿ

ಬಾಳಿದರೆ ಅವರ ಆತ್ಮಕ್ಕೆ ಖಂಡಿತ ತೃಪ್ತಿಯಾಗುವುದು. ಇದಲ್ಲದೆ ಕರ್ನಾಟಕದ ಹೆಮ್ಮೆಯ ಕುರುಹಾಗಿರುವಂತೆ ಒಂದು ಪ್ರಾಚ್ಯ ವಸ್ತು ಸಂಗ್ರಹಾಲಯವೂ, ಹಾಗೂ ಸಂಶೋಧನ ಕಾರ್ಯದಲ್ಲಿ ನೆರವಾಗುವ ಒಂದು ದೊಡ್ಡ ಸಂದರ್ಭ ಗ್ರಂಥಾಲಯವೂ ಇರಬೇಕು ಎಂಬುದು ಅವರ ಆತ್ಯಂತಿಕ ಇಚ್ಛೆಯಾಗಿದ್ದಿತು.

ರಾಜಪುರೋಹಿತರ ಜೀವನದಿಂದ ಇನ್ನೊಂದು ಸಾಮಾಜಿಕ ಚಟುವಟಿಕೆಯನ್ನು ಪುನರುಜ್ಜೀವಿಸುವುದು ಸಾಧ್ಯವಿದೆ. ಅದೆಂದರೆ ನಾಡಿನ ಪುಣ್ಯ ಪುರುಷರ ಹೆಸರಿನಲ್ಲಿ ಉತ್ಸವಗಳನ್ನು ನೆರವೇರಿಸುವುದು. ವಿವಿಧ ರಂಗಗಳಲ್ಲಿ ಬೆಳಗಿ ನಾಡಸೇವೆಯನ್ನು ಗೈದ ಚಾರಿತ್ರಿಕ ವ್ಯಕ್ತಿಗಳ, ಕವಿಗಳ, ಧರ್ಮ ಧುರೀಣರ ಜಯಂತಿಯನ್ನು ಸಂಘ ಸಂಸ್ಥೆಗಳು, ಆ ಆ ಊರುಗಳಲ್ಲಿ ಆಚರಿಸ ಬಹುದಾಗಿದೆ.

ಕಾಣ್ವ ಸಮಾಜದ ಏಳಿಗೆಗಾಗಿ ಶ್ರೀ. ರಾಜಪುರೋಹಿತರು ಸಾಕಷ್ಟು ಶ್ರಮಪಟ್ಟಿದ್ದಾರಷ್ಟೆ. ಅವರು ಒಂದು ಕಾಣ್ವ ಡಿರೆಕ್ಟರಿಯನ್ನು ಬರೆಯಬೇಕೆಂದು ಸಂಕಲ್ಪಿಸಿಕೊಂಡು ೧೯೨೪ ರಿಂದಲೂ ವಿಷಯ ಸಂಗ್ರಹ ಮಾಡತೊಡಗಿದ್ದರು. ಆದರೆ ಅದು ಪರಿಪೂರ್ಣವಾಗಲಿಲ್ಲ. ಆ ಶಾಖೆಯವರ ಯಾವುದೇ ಸಾಮಾಜಿಕ ಅಭ್ಯುದಯದ ಕಾರ್ಯನಿದ್ದರೂ ಅದು ಶ್ರೀ. ರಾಜಪುರೋಹಿತರ ಆತ್ಮಕ್ಕೆ ನೆಮ್ಮದಿಯನ್ನು ತರಬಲ್ಲದು.

ಇನ್ನೊಂದು ಬಗೆಯ ಸ್ಮಾರಕವಾಗಿ, ಅವರ ಬಿಡಿ ಲೇಖನಗಳನ್ನೂ, ಸಂಶೋಧನದ ವರದಿಗಳನ್ನೂ ಸಂಪಾದಿಸಿ ಹಲವು ಸಂಪುಟಗಳಲ್ಲಿ ಪ್ರಕಟಿಸುವುದು ಸಾಧ್ಯವಿದೆ. ಅಜಂತಾ ಪ್ರವಾಸ, ವಿಜಯನಗರದ ಇತಿಹಾಸ, ಇವಕ್ಕೆ ಸಂಬಂಧಪಟ್ಟ ಒಂದೆರಡು ಹಸ್ತ ಪತ್ರಿಕೆಗಳು ಅಪ್ರಕಟಿತವಾಗಿ ಉಳಿದಿವೆ. ಅಲ್ಲದೆ ಇದುವರೆಗಿನ ಅವರ ಗ್ರಂಥಗಳೂ ಪುನರ್ಮುದ್ರಣಕ್ಕೆ ಕಾದಿವೆ.

## ಕೊನೆಯ ಮಾತು

ಕನ್ನಡ ಸಮಾಜದಿಂದ ಇಷ್ಟನ್ನು ಅಪೇಕ್ಷಿಸುವಾಗ, ಶ್ರೀ. ರಾಜಪುರೋಹಿತರ ಸಂಶೋಧನೆಯಿಂದ ನಾಡಿಗಾದ ಪ್ರಯೋಜನವೇನು? ಅವರ ಸಂಶೋಧನೆಯು, ಮುಂದಿನ ಶೋಧಗಳಿಗೆ ಎಷ್ಟೊಂದು ನೆರವಾಗಿದೆ? ಅದರ

ಪರಿಣಾಮ ಪರೀಕ್ಷೆಗಳು ಬೇರೆ ಕ್ಷೇತ್ರಗಳಲ್ಲಿ ಕಂಡುಬರುವಂತಾಗಿವೆಯೆ? ಅವರು ಹೊರಡಿಸಿದ ಸಿದ್ಧಾಂತಗಳು ಇಂದಿಗೂ ಎಷ್ಟರಮಟ್ಟಿಗೆ ಉಳಿದುಕೊಂಡಿವೆ? ಎಂಬುದನ್ನು ಯೋಚಿಸುವ ಹಕ್ಕು ಪ್ರತಿಯೊಬ್ಬನಿಗೂ ಇದೆ. ಅವರ ಸಂಶೋಧನ ಕಾರ್ಯವು ಅತ್ಯಂತ ಆಳವಾದುದೂ, ಪಾಂಡಿತ್ಯ ಪೂರ್ಣವಾದುದೂ ಆಗಿತ್ತು ಎಂಬುದರಲ್ಲಿ ಸಂಶಯವಿಲ್ಲ. ಅವರಿಂದ ನಾಡಿಗೆ ಹತ್ತಾರು ರೀತಿಯಲ್ಲಿ ಪ್ರಯೋಜನವಾಗಿದೆ ಎಂಬುದರಲ್ಲಿ ಸಂದೇಹವೇ ಇಲ್ಲ. ಆದರೂ ಅವರ ಕ್ಷೇತ್ರ ಸೀಮಿತವಾದುದಿತ್ತು, ಎಂದು ಯಾರಿಗಾದರೂ ಅನಿಸಿದರೆ ತಪ್ಪಲ್ಲ. ಮತ್ತು ಅವರ ಕೆಲವೊಂದು ಸಿದ್ಧಾಂತಗಳೂ ತಪ್ಪಾಗಿರಬಹುದು.

ಆದರೆ ಅವರ ಕಾರ್ಯದ ಮೌಲ್ಯಮಾಪನ ಮಾಡಬೇಕಾದರೆ, ಅವರಿಗಿದ್ದ ಸಾಧನ ಸಾಮುಗ್ರಿ, ಅವರು ಜೀವಿದ ಆವರಣದ ಕಲ್ಪನೆಯನ್ನು ಯಥಾವತ್ತಾಗಿ ಮಾಡಿಕೊಳ್ಳಬೇಕಾಗುತ್ತದೆ. ಅವರಿಗೆ ಅಭ್ಯಾಸದ ಪೂರ್ತಿಗಾಗಿ ಗ್ರಂಥ ಭಂಡಾರಗಳ ತತ್ಕ್ಷಣದ ಅನುಕೂಲತೆ ಎಲ್ಲಿತ್ತು? ಅದೇ ವಿಷಯದಲ್ಲಿ ಪರಿಣತರಾದವರ ಆಸ್ಥೆಯುಳ್ಳವರ ವಿಚಾರ ಸಹಕಾರ ಎಷ್ಟರಮಟ್ಟಿಗೆ ರಾಜಪುರೋಹಿತರಿಗೆ ಒದಗಿ ಬಂದಿತ್ತು? ಇವೆರಡಕ್ಕಾಗಿ ಈಚಿಗೆ ಅವರು ಮಹಾರಾಷ್ಟ್ರದ ಕಡೆಗೆ ನೋಡುವಂತಾದುದು ನಮ್ಮಲ್ಲಿಯ ಶೋಚನೀಯ ಸ್ಥಿತಿಯನ್ನು ತೋರಿಸುತ್ತದೆ. ಉತ್ತಮವಾದ ಒಂದು ಸಂಶೋಧನ ಗ್ರಂಥ ಭಂಡಾರ, ಅಭ್ಯಾಸ ಮಂಡಲ ಇದ್ದಿದ್ದರೆ........

ಈ ಸಾಧನಗಳ ಜೊತೆಗೆ ಸಾಂಸಾರಿಕ ಅನುಕೂಲತೆಯೂ ಇದ್ದಿರಬೇಕಿತ್ತು. ತಮ್ಮ ದಿನಚರಿಯಲ್ಲಿ ಒಂದು ದಿನ ಬರೆಯುತ್ತ, ಮೊದಲಿಗೆ ೬-೭ ಸಂಗತಿಗಳನ್ನು ಕಾಣಿಸಿ, ಎಂಟನೆಯದಾಗಿ "ಇವತ್ತು ಹಿಟ್ಟಾಗಲಿ, ಅಕ್ಕಿಯಾಗಲಿ ಇಲ್ಲದ್ದರಿಂದ ರಾತ್ರಿ ಊಟ ಮಾಡಲಿಲ್ಲ" ಎಂದು ಬರೆದು, ಅದರ ಬುಡದಲ್ಲಿಯೇ "ಮಲಗುವಾಗ ಕಾತ್ಯಾಯನ ಇದರಲ್ಲಿ ಅಯನವೆಂದರೆ ಏನು ಎಂದು ಯೋಚಿಸುತ್ತ ಮಲಗಿದೆನು" ಎಂಬ ಕೊನೆಯ ಸಂಗತಿಯನ್ನು ಓದಿದಾಗ, 'ಅಯ್ಯೋ! ಈ ವ್ಯಕ್ತಿಗೆ ಸಂಸಾರದ ಮತ್ತು ಹೊಟ್ಟೆಯ ಚಿಂತೆ ತಪ್ಪಿದ್ದರೆ.... ತಪ್ಪಿದ್ದರೆ' ಎಂದು ಮಿಡುಕುವಂತಾಗುತ್ತದೆ. ಹಾಗೆ ತಪ್ಪಿದ್ದರೆ ಸಂಶೋಧನ ರಾಜ್ಯದಲ್ಲಿ ರಾಜಪುರೋಹಿತರ ಗೈಮೆ ಇದಕ್ಕೂ ಹೆಚ್ಚಿನ ಕ್ರಾಂತಿಯನ್ನು ಮಾಡಬಹುದಿತ್ತು ಎನಿಸುತ್ತದೆ.

ರಾಜಪುರೋಹಿತರು ಬುದ್ಧಿಜೀವಿಗಳು. ಪ್ರತಿಭಾಶಾಲಿಗಳು. ಅಂಥವರು ನಾಡಿನಲ್ಲಿರುವುದು ಒಂದು ಪುಣ್ಯ ವಿಶೇಷ. ಸಾಮಾನ್ಯ ಜನದ ಏಳಿಗೆಗಾಗಿಯೆ ಅಂತಹರ ಬದುಕು ಬೆಳಗುತ್ತದೆ ಎಂಬ ಭಾವನೆ ಎಲ್ಲವರಲ್ಲಿ ಉದಯಿಸಬೇಕು. ನಾಡಿನಲ್ಲಿ ಇತರ ರಂಗಗಳಲ್ಲಿಯೂ ಇರುವ ಬೇರೆ ಹಲವಾರು ರಾಜಪುರೋಹಿತರ ಜೀವನ ಹಸನಾಗಿರುವಂತೆ, ಕಾರ್ಯ ಉಜ್ವಲವಾಗುವಂತೆ ನೋಡಿಕೊಳ್ಳುವ ಪ್ರಜ್ಞೆ ಹಲವರಲ್ಲಿಯಾದರೂ ಒಡಮೂಡಿದರೆ ಈ ಚರಿತ್ರೆಯ ಲೇಖನವು ಸಾರ್ಥಕವಾಗುವುದೆಂದು ಭಾವಿಸಿದ್ದೇನೆ.

---

# ಅನುಬಂಧಗಳು

## ೧. ದಿನಚರಿಯ ಕೆಲವು ಪುಟಗಳಿಂದ

೬-೩-೧೯೧೪ ಧಾರವಾಡ

ಇವತ್ತಿನ ದಿವಸ........ದಾಸರ ಪದ ಸಂಗ್ರಹವನ್ನು ಮಾಡುವ ಸಂಸ್ಥೆಯನ್ನು ತೆಗೆಯಬೇಕು ಎಂಬ ವಿಷಯವಾಗಿ ವಿಚಾರ ನಡೆದಿದೆ. ಮ. ರಾ. ರಾ. ವೆಂಕಟರಾವ ಆಲೂರ, ಮ. ರಾ. ರಾ. ನಾರಾಯಣರಾವ ದೇಶಪಾಂಡೆ ಇವರೂ ವಿಚಾರ ಮಾಡಹತ್ತಿದ್ದಾರೆ. ಮುಂದೆ ಏನೇನು ನಿರ್ಣಯವಾಗುವದೊ ನೋಡಬೇಕು. (ಕರ್ತವ್ಯಾನಂದ)

೭-೩-೧೯೧೪

ಇವತ್ತಿನ ದಿವ್ಸ ಪ್ರಾತಃಕಾಲದಲ್ಲಿ ಪುರಂದರದಾಸ, ಕನಕದಾಸಾದಿ ಭಗವದ್ಭಕ್ತರ ಪದ ಸಂಗ್ರಹ ಮಾಡುವುದರ ಸಲುವಾಗಿ ಒಂದು ಸಂಸ್ಥೆಯನ್ನು ಸ್ಥಾಪಿಸುವದಕ್ಕಾಗಿ ಒಂದು ಹಸ್ತಪತ್ರಿಕೆಯನ್ನು ತೆಗೆದಿದ್ದೇನೆ. ಇದರಲ್ಲಿ ಯಶವು ಸಿಗುವ ಸಂಭವವು ಬಹಳ ಇಲ್ಲ.

ಕನ್ನಡ ಜನರಲ್ಲಿ ತಾರತಮ್ಯ ಬುದ್ಧಿ, ವೇಳೆಯ ಸದುಪಯೋಗ ಮಾಡುವ ಬುದ್ಧಿ, ಧೃಢ ನಿಶ್ಚಯ, ವ್ಯವಸ್ಥಿತತನ ಮುಂತಾದ ಸದ್ಗುಣಗಳು ಇಲ್ಲದಿರುವುದರಿಂದ ಅತಿ ಹೀನ ಸ್ಥಿತಿಯಲ್ಲಿ ಇದ್ದಾರೆ.

೮-೩-೧೯೧೪ ಧಾರವಾಡ

ಇವತ್ತಿನ ದಿವಸ ಪ್ರಾತಃಕಾಲ ೭ರಿಂದ ೧೦ ಘಂಟೆಯ ವರೆಗೆ ಹಸ್ತಪತ್ರಿಕೆಗಳನ್ನು ಹಂಚುವುದರಲ್ಲಿಯೇ ವೇಳೆ ಹೋಯಿತು. ೧೧ ಘಂಟೆಯಿಂದ ೩ ಘಂಟೆಯ ವರೆಗೆ ಮ. ರಾ. ನಾರಾಯಣರಾವ ದೇಶಪಾಂಡೆ ಇವರ ಸಂಗಡ ಕೆಲ ಪ್ರಶ್ನೆಗಳ ವಿಚಾರವಾಗಿ ವಿಚಾರ ಮಾಡಿ, ನಂತರ ಮ. ರಾ. ರಾ. ವೆಂಕಟರಾವ ಆಲೂರ ಇವರನ್ನು ಕರಕೊಂಡು ನಾರಾಯಣರಾಯರ ಮನೆಗೆ ಹೋದೆವು. ಅಲ್ಲಿಂದ ಮೂವರೂ ಕೂಡಿ ಮ. ರಾ. ರಾ. ಭೀಮರಾವ ಕವಲಾಪೂರ ಇವರ ಮನೆಗೆ ಹೋಗಿ ಅಲ್ಲಿಂದ ಪಟ್ಟೆಲ ಮುಂದಿಕ್ಕೆ ಹೋದೆವು,

೨೨-೧೦-೧೯೪೭

## ಸದ್ಯದ ಕರ್ತವ್ಯಗಳು

೧. ಕನ್ನಡ ರೀಸರ್ಚ ಡೈರಿ ಬರೆದು ಮುಗಿಸುವುದು.

೨. 'ಷಷ್ಟ್ಯಬ್ದಿ ಪೂರ್ತಿ' ಎಂದು ಕರಡಿಗೆಯ ಮೇಲೆ ಬರೆಯಿಸುವುದು.

೩. 'ಇತಿಹಾಸದ ಸಾಕಲ್ಯ ದರ್ಶನ' ಎಂಬ ಪ್ರಬಂಧ ಬರೆಯುವುದು.

೪. 'ನಿಜವಾದ ತವನಿಧಿ ಯಾವುದು?' ಎಂಬ ಪ್ರಬಂಧ ಬರೆಯುವುದು.

೫. 'ತ್ಯಾಗ ತಪಸ್ವಿಯ ಸ್ಮಾರಕ ಶಿಲೆ' ಎಂಬ ಪ್ರಬಂಧ.

೬. ಎಲ್ಲ ಸಾಲ ಕೈಗಡ ಉದ್ರಿಗಳನ್ನು ತೀರಿಸಿ ಋಣಮುಕ್ತತೆ.

೭. ಹಾವೇರಿ, ನವಲಗುಂದ, ವಿಜಾಪೂರ, ಸಾಂಗಲಿ ಈ ನಗರಗಳಿಂದ ಸತ್ಕಾರ ಸಮಿತಿ ಹಣ ವಸೂಲು ಮಾಡುವುದು.

೮. ಪನವೇಲದ ಬ್ರಾಹ್ಮೀಶೀಲ, ಪ್ಲೇಗ ಪ್ರತಿಬಂಧಕ ಪಿಲ್ಸ ತೆಗೆದುಕೊಳ್ಳುವುದು.

೯. ಹಾವಿನ ಪರಿ, ಅಘು ತಂದು ತುಳಸಿ ರಸದಲ್ಲಿ ತಿಕ್ಕಿ ಹಚ್ಚಿಕೊಳ್ಳುವುದು.

೧೦. ರಾಯಚೂರು, ಮಂಗಳೂರು, ಗಲಗಲಿ, ಮುಂಬಯಿಗಳಿಗೆ ಪತ್ರಗಳನ್ನು ಬರೆದು ಹಾಕುವುದು.

೧೧. ಮಾನಪತ್ರವು ಪ್ರಸಿದ್ಧವಾದ 'ನವಯುಗ' ತೆಗೆದುಕೊಳ್ಳುವದು.

೧೨. ಕನ್ನಡ ರೀಸರ್ಚ ಆಫೀಸಿನಲ್ಲಿ ಪ್ರ. ಕ. ವನ್ನು ಓದುವುದು.

೧೩. ಈ ವರ್ಷದ ಮತ್ತು ಮುಂದಿನ ಚಿತ್ರಮಯ ಜಗತ್ ತರಿಸುವುದು.

೧೪. "ತಾಳಗುಂದ ಆಣಿ ಚಿಪಳೂಣ ಇಥೀಲ ಅಗ್ರಹಾರ" ಎಂಬ ಮರಾಠೀ ಲೇಖನವನ್ನು ಆ ಮಾಸಪತ್ರಿಕೆಯಲ್ಲಿ ಪ್ರಸಿದ್ಧ ಮಾಡುವದು.

೧೫. "ಕರಹಟ ಅಗ್ರಹಾರ" ಎಂಬ ಲೇಖವನ್ನೂ ಪ್ರಸಿದ್ಧ ಮಾಡುವುದು.

೧೬. ಮೈಸೂರು, ಬೆಂಗಳೂರು, ರಾಯಚೂರು, ಪುಣೆಗಳಿಗೆ ಪ್ರವಾಸ ಮಾಡಿ ಬರುವುದು.

## ೧೯೪೮

## ನಾಗಪುರದಲ್ಲಿ ಪರಮಾತ್ಮನ ಆಜ್ಞೆಯಂತೆ ಮಾಡತಕ್ಕ ಕರ್ತವ್ಯಗಳು

೧. ಪ್ರೊ. ಡಿ. ಜಿ. ಕರ್ವೆ ಇವರಿಗೆ ಕಾಣ್ವ, ಚಿತ್ಪಾವನ, ಕರ್ಹಾಡೆ, ಸಹವಾಸಿ ಬ್ರಾಹ್ಮಣರ ಬಗ್ಗೆ ಯಥಾರ್ಥವಾದ ಇತಿಹಾಸವನ್ನು ಬರೆಯುವುದಕ್ಕೆ ತಿಳಿಸುವದು.

೨. ಬುದ್ಧಪುರಿ ವಿದ್ಯಾಲಯ ಅರ್ಥಾತ್ ಬಿಜ್ಜಳ ಬೀಡು ಈ ಸ್ಥಳಗಳ ಬಗ್ಗೆ ಪ್ರೊ. ಕೋಲತೆ, ಪ್ರೊ. ಮಿರಾಶಿ, ಪ್ರೊ. ಪೇಂಡಸೆ ಪ್ರಭೃತಿ ವಿದ್ವಜ್ಜನರೊಡನೆ ವಿಚಾರ ವಿನಿಮಯ ಮಾಡುವುದು.

೩. ಡಾ. ರಘುವೀರ ಎಂ. ಎ., ಪಿಎಚ್. ಡಿ. ಇವರಿಗೆ "ಶುಕ್ಲ ಯಜುರ್ವೇದ ಎಂದರೆ ಶುದ್ಧ ಯಜುರ್ವೇದ ಅರ್ಥಾತ್ pure ಯಜುರ್ವೇದ" ಎಂದು ಉಲ್ಲೇಖ ಮಾಡಿರಿ. ವ್ಹಾಯಿಟ್ ಯಜುರ್ವೇದ ಎಂದು ಉಲ್ಲೇಖ ಮಾಡಬೇಡಿರೆಂದು ಹೇಳುವುದು.

೪. ಮಾಹಿಷ್ಮತಿಯ ಉತ್ಖನನದಿಂದ ಏನು ಹೊಸ ಶೋಧ ಗೊತ್ತಾಗಿದೆ.

೫. ಇಲಿಯಟ್ ಮ್ಯಾನಸ್ಕ್ರಿಪ್ಟ್ಸ್ ಕಲೆಕ್ಷನ್ ವ್ಹಾ. 1 ಇದು ಇಲ್ಲಿಯ ವಿಶ್ವ ವಿದ್ಯಾಲಯದ ಲೈಬ್ರರಿಯಲ್ಲಿ ಇದೆಯೋ ಹೇಗೆ ನೋಡುವುದು.

೧೪-೧-೧೯೪೯ ಧಾರವಾಡ

೧. ಪ್ರಾತಃಕಾಲ, ಸಂಕ್ರಮಣದ ಹಬ್ಬವಿದ್ದುದರಿಂದ ಬಿ. ಟಿ. ಸಿ. ಕಾಲೇಜದ ವಿದ್ಯಾರ್ಥಿಗಳು ತಮ್ಮ ಕಾಲೇಜದಲ್ಲಿ ೯ ಘಂಟೆಗೆ 'ಕರ್ನಾಟಕದ ಹಬ್ಬಗಳು' ಎಂಬ ವಿಷಯವನ್ನು ಕುರಿತು ನನ್ನ ಭಾಷಣವನ್ನು ಏರ್ಪಡಿಸಿದ್ದರು. ನಾನು ಅಲ್ಲಿಗೆ ವೇಳೆಗೆ ಸರಿಯಾಗಿ ಹೋಗಿ ೯ ಘಂಟೆಯಿಂದ ೧೧ ಘಂಟೆಯ ವರೆಗೆ ೨ ತಾಸು ಭಾಷಣ ಮಾಡಿ, ಹೊರಡಲು ಟಾಂಗಾ ಮಾಡಿ ನನ್ನನ್ನು ಮನೆಗೆ ಕಳುಹಿಸಿಕೊಟ್ಟರು.

೨. ಭೋಜನೋತ್ತರದಲ್ಲಿ ಪರಾಗ ಮಾಸಿಕದಲ್ಲಿಯ 'ಕರಹಾಟ ಅಗ್ರಹಾರ' ಲೇ. ೨ ಎಂಬ ನನ್ನ ಲೇಖನವನ್ನು ಓದುತ್ತ ವಿಶ್ರಮಿಸಿದೆನು.

೩. ಚಿ. ಸರೋಜಿನಿದೇವಿಯು ಹಚ್ಚಿದ ಕುಸುರೆಳ್ಳುಗಳನ್ನು ತೆಗೆದ
ಕೊಂಡು ಮದಿಹಾಳದಲ್ಲಿಯ ಶ್ರೀ ಬಾಪೂ ದೀಕ್ಷಿತ ಪ್ರಭೃತಿಗಳಿಗೆ, ಶ್ರೀ
ಎನ್. ಆರ್., ನಾರಾಯಣ ಶರ್ಮಾ ಇವರಿಗೆ ಕೊಟ್ಟೆನು.

**೧೫–೨–೧೯೪೯ ಧಾರವಾಡ**

೧. ಕಲ್ಯಾಣ ಚಾಲುಕ್ಯರ ಇತಿಹಾಸ ಬರೆದು ಮುಗಿಸಿದೆ. ಸಿಂಹಾವ
ಲೋಕನ ಮಾತ್ರ ಉಳಿಯಿತು.

೨. ಅಕ್ಷೋಭ್ಯ ತೀರ್ಥರ ಗ್ರಂಥ ನಿರೀಕ್ಷಣದ ಬಗ್ಗೆ ನವಲಗುಂ
ವೆಂಕಟರಾಯರಿಗೆ ಸೂಚನೆ.

೩. ಕರ್ಜಗಿ ಆಚಾರ್ಯರಿಗೆ ೧ ರೂ. ಸಂಭಾವನೆ ಕೊಟ್ಟದ್ದು.

೪. ಮನೆಯಲ್ಲಿ ಸುರೇಶ್ವರಾಚಾರ್ಯರ ಉತ್ಸವವನ್ನು ಮಾಡುವುದು.

**೧೮–೨–೧೯೪೯ ರಾಯಚೂರು**

೧. ಪ್ರಾತಃಕಾಲ:— ಶ್ರೀಮಾನ್ ರಾಘವೇಂದ್ರರಾವ ತಾವರಗೇ
ಇವರು ೧೦೦ ರೂ. ಗಳನ್ನೂ ೮ ವಾರ ಧೋತರ ಜೋಡಿಯನ್ನೂ ನನ
ಕೊಟ್ಟರು.

೨. ಕೋಟೆಯಲ್ಲಿಯ ‹ಕರ್ನಾಟಕ ಸಂಘದಲ್ಲಿ ‘ವಿಜಯನಗ
ಸಾಮ್ರಾಜ್ಯ’ ವೆಂಬ ವಿಷಯವನ್ನು ಕುರಿತು ಭಾಷಣ ಮಾಡಿದೆನು.

**೩೦–೧೨–೧೯೫೨ ಧಾರವಾಡ**

೧. ಪ್ರಾತಃಕಾಲ:— ಪ್ರಾತರ್ವಿಧಿ, ಚಹಾಪಾನ.

೨. ಎಲ್ಲ ಪುಸ್ತಕಗಳನ್ನು ವ್ಯವಸ್ಥಿತ ರೀತಿಯಿಂದ ಇಟ್ಟೆನು.

೩. ಕೆ. ಎಸ್ ಉಪಾಧ್ಯೆ ಇವರಲ್ಲಿ ವಿಶ್ರಾಂತಿ.

೪. ಶ್ರೀ ........ರಲ್ಲಿ ಚಹಾ. ೮ ಆಣೆ ಕೈಗಡ.

**೭–೮–೧೯೫೩ ಸಂಗೂರು**

ಗೋಕ್ಷೀರ ಧಾರೋಷ್ಣ ಸ್ವೀಕರಿಸಿದೆನು.

(ಇದು ಅವರು ಬರೆದ ಕೊನೆಯ ದಿನಚರಿ.)

ಅನುಬಂಧ ೨.

# ರಾಜಪುರೋಹಿತ ಲೇಖನ ಸೂಚಿ

## ಇತಿಹಾಸ

| ಲೇಖನ | ಪತ್ರಿಕೆ | ವರ್ಷ |
| --- | --- | --- |
| ಮಹಾರಾಷ್ಟ್ರ ವ ಕರ್ನಾಟಕ (ಮರಾಠಿ) | ಕೇಸರೀ | ೧೯೧೭-೧೮ |
| ಸತ್ಯಾಶ್ರಯ ಪುಲಕೇಶಿ ವಲ್ಲಭ | ಜಯ ಕರ್ನಾಟಕ | ೧೯೨೩ |
| ವಿಜಯನಗರದ ಕೃಷ್ಣದೇವರಾಯನು ಕನ್ನಡಿಗನು. | ಕರ್ನಾಟಕ ಧುರೀಣ | ೧೯೨೯ |
| ರಾಕ್ಷಸ ತಂಗಡಗಿ ರಣಭೂಮಿಚ್ಯಾ ಸ್ಥಳ- ನಿರ್ಣಯ (ಮರಾಠಿ) | ಭಾ. ಇ. ಸಂ. ಮಂಡಳ ಪತ್ರಿಕೆ | ೧೯೨೯ |
| ತಿರುಳ್ಗನ್ನಡ ನಾಡು | ಪರಿಷತ್ಪತ್ರಿಕೆ | ೧೯೨೯ |
| ಭೂಲೋಕ ಮಲ್ಲನಾರು ? | ಜಯ ಕರ್ನಾಟಕ | ೧೯೩೦ |
| ಎರಡಚು ನೂರರ ನಾಡು ಯಾವುದು ? | ಪರಿಷತ್ಪತ್ರಿಕೆ | ೧೯೩೧ |
| ಶ್ರೀಮಚ್ಚಾಳುಕ್ಯ ವಿಕ್ರಮಾಂಕನ ಪಟ್ಟ ಬಂಧೋತ್ಸವ ವರ್ಷ. | ಜಯ ಕರ್ನಾಟಕ | ೧೯೩೧ |
| ಶ್ರವಣಬೆಳ್ಗೊಳ ಮತ್ತು ಕೊಪಣ ಕ್ಷೇತ್ರ | ಜಯ ಕರ್ನಾಟಕ | ೧೯೩೧ |
| ಗೆರಸೊಪ್ಪೆ | ಜಯ ಕರ್ನಾಟಕ | — |
| ರಕ್ಕಸತಂಗಡಗಿ ರಣಭೂಮಿ | ಪ್ರಾಚೀನ ಕರ್ನಾಟಕ | ೧೯೩೩ |
| ಅಪರಾದಿತ್ಯನು ಶಿಲಾಹಾರ ರಾಜನು, ಚೋಳ ರಾಜನಲ್ಲ. | ಜಯ ಕರ್ನಾಟಕ | ೧೯೩೯ |
| ನಿಜವಾದ ತಪಸಿಧಿ ಯಾವುದು ? | ನವಯುಗ | ೧೯೪೭ |

## ಸಾಹಿತ್ಯ

| | | |
| --- | --- | --- |
| ಮಾತನಾಡುವ ಭಾಷೆಗೆ ವ್ಯಾಕರಣ ರಚನೆ | ವಾಗ್ಭೂಷಣ | ೧೯೧೮ |
| ಕನ್ನಡ ಗ್ರಂಥಗಳು ಪರಭಾಷೆಗೆ ಪರಿವರ್ತಿಸಲ್ಪಟ್ಟಿವೆಯೆ ? | ವಾಗ್ಭೂಷಣ | ೧೯೨೦ |

| ಲೇಖನ | ಪತ್ರಿಕೆ | ವರ್ಷ |
|---|---|---|
| ಲಕ್ಷ್ಮೀಶನ ಸ್ಥಳ ಕಾಲ ಮತಗಳ ನಿರ್ಣಯ | ಪರಿಷತ್ಪತ್ರಿಕೆ | — |
| ಕವಿರಾಜ ಮಾರ್ಗದ ಕರ್ತೃವು ಯಾರು | ,, | — |
| ನೃಪತುಂಗನೇ ಕವಿರಾಜ ಮಾರ್ಗಕಾರನು | ,, | — |
| ಚೌಂಡರಸ ಕವಿ | ,, | ೧೯೨೪ |
| ಕನ್ನಡ ಲಾಕ್ಷಣಿಕರು ಮತ್ತು ಪ್ರಾಕೃತ ಭಾಷೆ | — | ೧೯೨೬ |
| ಗಜಾಂಕುಶ, ದುರ್ಗಸಿಂಹ, ಬಸವೇಶ, ರನ್ನ, ರುದ್ರಭಟ್ಟರ ಶಾಖೆ | ,, | ೧೯೩೨ |
| ಕುಮಾರವ್ಯಾಸನ ಕಾಲ ಮತಗಳ ನಿರ್ಣಯ | ,, | ೧೯೩೬ |
| ಕುಮಾರವ್ಯಾಸನು ಚಾಮರಸನ ಸಮಕಾಲೀನನಲ್ಲ | ಜಯ ಕರ್ನಾಟಕ | ೧೯೩೯ |
| ಹರಿಹರನ ಕಾಲ ಮತ ನಿರ್ಣಯ | ‘ ಹರಿಹರದೇವ ’ | ೧೯೩೭ |
| ರನ್ನನ ಕಾಲ ನಿರ್ಣಯದ ಶಾಸ್ತ್ರೀಯ ರೀತಿ | ಜಯ ಕರ್ನಾಟಕ | ೧೯೩೮ |
| ಸತ್ಯಾಶ್ರಯ, ಅಪರಾದಿತ್ಯರ ಯುದ್ಧ ಮತ್ತು ಗದಾಯುದ್ಧದ ಕಾಲ ನಿರ್ಣಯ | ,, | ೧೯೩೯ |
| ರತ್ನಾಕರ ವರ್ಣಿಯ ಕಾಲ ನಿರ್ಣಯ—೧ | — | — |
| ರತ್ನಾಕರ ವರ್ಣಿಯ ಕಾಲ ನಿರ್ಣಯ—೨ | ವಾಗ್ಭೂಷಣ | — |
| ರತ್ನಾಕರ ವರ್ಣಿಯ ಕಾಲ ನಿರ್ಣಯ—೩ | ಜಯ ಕರ್ನಾಟಕ | ೧೯೪೯ |
| ನಾಗವರ್ಮನ ಸ್ಥಳ, ಕಾಲ ಮತಗಳ ನಿರ್ಣಯ | ವಾಗ್ಭೂಷಣ | ೧೯೪೭ |

## ಧರ್ಮ

| | | |
|---|---|---|
| ಶ್ರೀಮತ್ಸುರೇಶ್ವರಾಚಾರ್ಯ (ಮರಾಠಿ) | ಆಚಾರ್ಯ | ೧೯೧೬ |
| ಸುರೇಶ್ವರಾಚಾರ್ಯ ವ ಮಾಹಿಷ್ಮತೀ ( ,, ) | ಜ್ಞಾನೇಶ್ವರ | — |
| ವಿದ್ಯಾರಣ್ಯರನ್ನು ಕುರಿತು (೫ ಲೇಖನಗಳು) | ಕರ್ಮವೀರ | ೧೯೨೧–೨೯ |
| ವಿಠ್ಠಲ ಭಕ್ತಿಯ ಇತಿಹಾಸ (೩ ಲೇಖನಗಳು) | ಕೇಸರಿ, ಧನಂಜಯ ಮತ್ತು ವಾಗ್ಭೂಷಣ | ೧೯೧೪– ೧೯೧೬ |
| ಮಂಗಳವೇಢೆ ದೇಶಪಾಂಡೆಯವರು ಜಯತೀರ್ಥರ ವಂಶಜರಲ್ಲ. | ಕನ್ನಡಿಗ | ೧೯೨೬ |

| ಲೇಖನ | ಪತ್ರಿಕೆ | ವರ್ಷ |
|---|---|---|
| ಸುರೇಶ್ವರಾಚಾರ್ಯರು ಮತ್ತು ಭವಭೂತಿ | ಪ್ರಾಚೀನ ಕರ್ನಾಟಕ | ೧೯೩೨ |
| ಅರವತ್ತೊಕ್ಕಲು ಬ್ರಾಹ್ಮಣರು | ಜಯ ಕರ್ನಾಟಕ | ೧೯೩೫ |
| ಪುರಾಣ ಭಾಸ್ಕರರು (೨ ಲೇಖನಗಳು) | ,, | ೧೯೩೭ |
| ಮಧ್ವಾಚಾರ್ಯರ ಶಾಖಾ ನಿರ್ಣಯ | ,, | ೧೯೩೭ |
| ಅಕ್ಷೋಭ್ಯತೀರ್ಥರ ಮತ್ತು ವಿದ್ಯಾರಣ್ಯರ ವಾದವಿವಾದ | ಅರುಣೋದಯ | ೧೯೩೭ |
| ಕೊಪಣ ತೀರ್ಥ (ಮರಾಠಿ) | ಜೈನಬೋಧಕ | — |
| ತಾಳಗುಂದ, ಚಿಪಳೂಣ ಅಗ್ರಹಾರ | ಪ್ರಬುದ್ಧ ಕರ್ನಾಟಕ | ೧೯೪೬ |
| ,, ,, ,, (ಮರಾಠಿ) | ಸಹ್ಯಾದ್ರಿ | ೧೯೪೬ |
| 'ಕರಹಟ ಅಗ್ರಹಾರ (ಮರಾಠಿ) | ಪರಾಗ | ೧೯೪೮ |
| ಶ್ರೀಕೃಷ್ಣ ಭಗವಾನ್ ಕಾಣ್ವ ಶಾಖೀಯ ಕ್ಷತ್ರಿಯ (ಮರಾಠಿ) | ಕಾಣ್ವ ವಿಕಾಸ | ೧೯೪೯ |
| ಕಾಣ್ವೋಪನಿಷತ್ ವ ಕಾಣ್ವ ಶ್ರೀಕೃಷ್ಣ ಭಗವಾನ್ (ಮರಾಠಿ) | ಪರಾಗ | ೧೯೪೮ |
| ಕಾಣ್ವ ಸಾಮ್ರಾಜ್ಯ | ಭಾ. ಇ.ಸಂ. ಮಂಡಳ | ೧೯೫೨ |
| ತಿಮ್ಮಮ್ಮನವರ ಚರಿತ್ರೆ | ವೀರಮಾತೆ | ೧೯೫೩ |

## ಇತರ

| | | |
|---|---|---|
| ಸಂಶೋಧಕ ಗೋಷ್ಠಿಯ ಅಧ್ಯಕ್ಷ ಭಾಷಣ | ಜಯ ಕರ್ನಾಟಕ | ೧೯೫೩ |
| ದಿವಂಗತರಾದ ಇಬ್ಬರು ಇತಿಹಾಸ ಸಂಶೋಧಕರು | ಪ್ರಾಚೀನ ಕರ್ನಾಟಕ | ೧೯೩೨ |
| ಮುಮುಕ್ಷು ಬೇಂದ್ರೆ | — | ೧೯೪೯ |
| ಇತಿಹಾಸ ಪ್ರಾಧ್ಯಾಪಕ ಬಸವನಾಳರು | ಜಯ ಕರ್ನಾಟಕ | ೧೯೫೩ |

( ಈ ಪಟ್ಟಿಯು ಅಪೂರ್ಣವಿದೆ. )

ಯಾವುದೋ ಒಂದು ವಿಲಕ್ಷಣ ಕಾರಣದಿಂದ ಕನ್ನಡ ಇತಿಹಾಸ ಸಂಶೋಧಕರಾದ ಶ್ರೀಮಾನ್ ರಾಜಪುರೋಹಿತರು ನನ್ನ ಮೊದಲನೆಯ (ಚರಿತ್ರಾತ್ಮಕ) ನಾಟಕಕ್ಕೆ ಸ್ಫೂರ್ತಿಯನ್ನು ಕೊಟ್ಟು ಕಾರಣೀಭೂತರಾಗಿದ್ದಾರೆ. ಈ ನಾಟಕದ ಸಂದರ್ಭದಲ್ಲಿ ನಾನು ಅವರನ್ನು ಯಾವಾಗಲೂ ನೆನಸುವೆನು, ಎಂದಿಗೂ ಕೃತಜ್ಞನೆನಿಸುವೆನು.

‘ಪರಮೇಶ್ವರ ಪುಲಕೇಶಿ’ಯ ಮುನ್ನುಡಿ. —ಶ್ರೀರಂಗ

# ಶ್ರದ್ಧಾಂಜಲಿ

**ಸರ್ವಶ್ರೀ**

ವಿನಾಯಕ ಕೃ. ಗೋಕಾಕ

ಆಲೂರ ವೆಂಕಟರಾಯ

ದ. ರಾ. ಬೇಂದ್ರೆ

ರಂ. ಶ್ರೀ. ಮುಗಳಿ

ಆರ್. ಸಿ. ಹಿರೇಮಠ

ದೇಸಾಯಿ ಪಾಂಡುರಂಗರಾಯ

ಗ. ಶಿ. ಹುರಳಿ

ಪಾಂಡೇಶ್ವರ ಗಣಪತರಾವ

ಮತ್ತು

ಸೌ. ಸುಂದರಾ ಕುಲಕರ್ಣಿ

ಮಧ್ವ ರಾಜಪುರೋಹಿತ

—ಅವರಿಂದ

## ಜ್ಞಾನಿ

ಬಡತನವು ಬಂದು ಮನೆಯೊಳಗೆ ತಾಂಡವವಾಡಿ
ನಿನ್ನ ತನು ಮನಗಳನು ನೋಯಿಸಿತ್ತು;
ನಿನ್ನ ಜ್ಞಾನೋಪಾಸನೆಯು ನಿತ್ಯ ಕಳೆಗೊಂಡು
ನಾಡ ಕಣ್ಮನಗಳನು ತೋಯಿಸಿತ್ತು.

ಅಕ್ಕಿ ಜೋಳಗಳಿಲ್ಲವೆಂದು ಹೆಂಡತಿ ಕನಲಿ
ದುರದುರನೆ ನೋಡಿರಲು ನಿನ್ನ ಮೊಗವ
ಶೂನ್ಯ ಮಂಟಪವಾವ ತಾಣದಲ್ಲಿತ್ತೆಂಬು-
ದನು ಕಂಡೆನೆಂದು ನೀ ತಾಳ್ದೆ ಸೊಗವ.

ಮಗುವೊಂದು ವಿಷಮಜ್ವರದಿಂದೊರಲಿ ಮಲಗಿರಲು
ತಾಳಿಕೋಟಿಯ ಯುದ್ಧವಾವ ತಡಿಗೆ
ಎಸಗಿತೆಂಬುದರ ಸಿರ್ಧಾರಕ್ಕೆ ನೀ ನಡೆದೆ
ಬಿಸಿಲಿನಲಿ ಬೆಳುವಲದ ನಾಡ ಗಡಿಗೆ.

ಮನೆಯಲ್ಲಿ ಹೆಂಡತಿಯು ಹಡೆದು ಹಾಸಿಗೆ ಹಿಡಿದು
ಹಾಲು ಕಾಣದ ಕೂಸು ನರಳುತಿರಲು
'ನಲ್' ಎಂಬ ನಲ್ನುಡಿಯ ಮೂಲ ಹೊಳೆದಿತ್ತೆಂದು
ನೀನು ಕುಣಿದಿದ್ದೆ ಮನವರಳುತಿರಲು.

ನಿನಗಿಲ್ಲ ಮೆಟ್ಟಲಿಕೆ ಕೆರ-ಮೊಚ್ಚೆಗಳ ಜೋಡು
ಪುಲಕೇಶಿ ಎಂಥ ಪಾದ ತ್ರಾಣವ
ತುಳಿದನೆಂಬುದ ತಿಳಿಯ ಬಯಸಿ ನೀ ಪರಿಕಿಸಿದೆ
ಬಾದಾಮಿ ಬಸದಿಗಳಿಗಿಹ ಮೇಣವ.

ವಿಜಯನಗರದ ವಿಭವಗಳಿಗೆ ಬಣ್ಣವನಿತ್ತೆ
ಹೊಸ ಕುರುಹಗಳನು ನೀ ಸಂಶೋಧಿಸಿ
ಮನೆಯಲಿಹ ದುರ್ಭಿಕ್ಷೆ ಸುಖವ ಕನಸಾಗಿಸುತ
ನೀನೊಲಿದ ಪತ್ನಿ–ಸುತರನು ಬಾಧಿಸಿ.

ಬಂದ ಸಂಕಟಗಳನು ತರಿಮೊಗೆವ ಸಾಮರ್ಥ್ಯ-
ವಿಲ್ಲದಿದ್ದರೆ ನಿನ್ನ ವಿಧಿಲಿಖಿತದಲ್ಲಿ
ತಾಳುವೆದೆಗಾರಿಕೆಯ ನೀಡೆಂದು ಮೊರೆಯಿಟ್ಟೆ
ದೇವನೆಡೆ, ಮನವಿರಲು ಸ್ತಿಮಿತದಲ್ಲಿ.

ಮನೆಯ ತುಂಬಿರಲಿಂತು ಮುಗಿಯಲಾರದ ದುಃಖ
ಮುಗಿಯದಾ ಬಿನ್ನಾಣ ಮನವ ತುಂಬಿ
ಬೆಳಗಿತ್ತು ಬಂದ ಕೊರತೆಗಳೆಲ್ಲವೊರೆಗಲ್ಲು
ಜ್ಞಾನವನ್ನೊರೆಯಲೆಂದಿರಲು ನಂಬಿ.

'ಬಾಳದೇಗುಲದಲ್ಲಿ'

—ವಿನಾಯಕ

ಶ್ರೀ

ಶ್ರೀ ನಾರಾಯಣ ಶ್ರೀನಿವಾಸ ರಾಜಪುರೋಹಿತರು ಸ್ವಾರ್ಥತ್ಯಾಗಿಗಳು, ಇತಿಹಾಸ ಸಂಶೋಧಕರು, ರಾಷ್ಟ್ರೀಯ ಮನೋವೃತ್ತಿಯವರು, ಕರ್ನಾಟಕದ ಉಜ್ವಲ ಅಭಿಮಾನಿಗಳು, ಧರ್ಮಾಭಿಮಾನಿಗಳು, ಸದಾಚಾರಿಗಳು, ಸ್ಪಷ್ಟ-ವಾದಿಗಳು. ಅವರು ಕನ್ನಡ ಶಾಲಾ ಮಾಸ್ತರರಾಗಿದ್ದರು. ೧೯೦೭ನೆಯ ಇಸ್ವಿಯ ಸುಮಾರಕ್ಕೇನೇ ಅವರು ತಮ್ಮ ಸರಕಾರೀ ನವಕರಿಗೆ ರಾಜೀನಾಮೆ ಕೊಟ್ಟು, ನಾನು ತೆಗೆದ ರಾಷ್ಟ್ರೀಯ ಶಾಲೆಗೆ ಶಿಕ್ಷಕರಾದರು. ಸರಕಾರದ ದಬ್ಬಾಳಿಕೆಯ ಮೂಲಕ ಆ ಶಾಲೆ ಹಕ್ಕ ಕೂಡಿದಾಗ, ಅವರು ಕೇವಲ ಯಾವುದೊಂದು ರಾಷ್ಟ್ರೀಯ ಕಾರ್ಯದಲ್ಲಿಯೇ ತಮ್ಮ ಆಯುಷ್ಯವನ್ನು ಹಾಕುವ ದೃಢ ನಿರ್ಧಾರದಿಂದ ವಿಚಾರ ಮಾಡಹತ್ತಿದರು. (ಸರಕಾರದ ದಬ್ಬಾಳಿಕೆಯು ಆಗ ಎಲ್ಲಿಯವರೆಗೆ ಹೋಗಿತ್ತೆಂದರೆ ರಾಜಪುರೋಹಿತರು ಕರ್ನಾಟಕ ವಿದ್ಯಾವರ್ಧಕ ಸಂಘಕ್ಕೆ ಅಜೀವ ಸದಸ್ಯರಾಗಲು ಹಣ ಕೊಟ್ಟರೆ, ಸಂಘದವರು ಹೆದರಿ ಅದನ್ನು ಸ್ವೀಕರಿಸಲಿಲ್ಲ; ನಾನು ಮುಂಚೆಯೇ ಸದಸ್ಯನಾಗಿ ಹೋಗಿದ್ದೆ.) ಬಡೋದೆಯ ರಾಷ್ಟ್ರೀಯ

ಶಾಲೆಯಾದ ಗಂಗಾನಾಥ ವಿದ್ಯಾಲಯಕ್ಕೆ ಪ್ರಿನ್ಸಿಪಾಲನಾಗಲು ನನಗೆ ಕರೆ ಬಂದಿತು. ಶ್ರೀ. ರಾಜಪುರೋಹಿತರಿಗೂ ಅಲ್ಲಿ ಸ್ಥಳ ಸಿಗಬಹುದಾಗಿತ್ತು. ಆವರೆಗೆ ನಾವಿಬ್ಬರೂ ಸರಕಾರದ ರೋಷಕ್ಕೆ ಪಾತ್ರರಾದವರು ಅಲ್ಲಿಗೆ ಹೋದರೆ ಆ ಶಾಲೆಯೂ ಸರಕಾರದ ದಬ್ಬಾಳಿಕೆಗೆ ತುತ್ತಾಗಬಹುದೆಂದು ತಿಳಿದೂ ಮತ್ತು ಅಲ್ಲಿಗೆ ಹೋದರೆ ಕರ್ನಾಟಕದ ಸೇವೆಗೆ ಎರವಾಗಬೇಕೆಂದು ತಿಳಿದೂ ನಾವು ಹೋಗಲಿಲ್ಲ. ಇಲ್ಲಿಯಂತೂ ಸೇವೆಗೆ ಆಸ್ಪದವೇ ದೊರೆಯಲಿಲ್ಲ; ನಾನು ವಕೀಲನಾಗಿದ್ದರಿಂದ, ವಕೀಲಿ ಪ್ರಾರಂಭಿಸಲಿಕ್ಕೆ ಅನುವು ಇತ್ತು. ಪ್ರಾರಂಭಿಸಿ ಕೆಲ ವರ್ಷ ಮಾಡಿದೆ. ಆದರೆ ಅವರೇನು ಮಾಡಬೇಕು? ಆ ಬಗ್ಗೆ ಅವರು ಧೃತಿಗೆಡಲಿಲ್ಲ. ಅವರ ಲಗ್ನವಾಗಿದ್ದಿಲ್ಲ, ಬ್ರಹ್ಮಚರ್ಯದಿಂದ ಇದ್ದು ಏನಾದರೂ ಧರ್ಮಸೇವೆ ಅಥವಾ ದೇಶಸೇವೆ ಮಾಡಬೇಕೆಂದು ಯೋಚಿಸಿದರು. ನಮ್ಮ ಮನೆಯೇ ಅವರ ಮನೆ, ಹೆಸರಿಗೆ ಮಾತ್ರ ಬೇರೆ ಕಡೆಗೆ ಊಟಮಾಡಿ ನಮ್ಮ ಮನೆಯಲ್ಲಿದ್ದ ನನ್ನ 'ಭಾರತ ಪುಸ್ತಕಾಲಯ' ವೆಂಬ ಗ್ರಂಥ ಭಾಂಡಾರದೊಳಗಿನ ಕನ್ನಡ ಮರಾಠೀ ಪುಸ್ತಕಗಳನ್ನೆಲ್ಲ (ಅವರಿಗೆ ಇಂಗ್ಲೀಷ ಬರುತ್ತಿರಲಿಲ್ಲ) ಓದಿ ಬಿಟ್ಟರು. ೧೯೦೭ ನೆ ಇಸ್ವಿಯಲ್ಲಿ ನಾನು ಶ್ರೀ. ವಿದ್ಯಾರಣ್ಯ ಚರಿತ್ರೆ ಬರೆದಿದ್ದೆ. ಅವರಿಗೂ ಇತಿಹಾಸದ ಕಡೆಗೆ ಒಲವು ಹುಟ್ಟಿತು. ಅದರಲ್ಲಿಯೂ ಸಂಶೋಧನ ಕಾರ್ಯವು ಅವರ ಮನಸ್ಸನ್ನು ಪೂರಾ ಸೆಳೆಯಿತು. ಲಗ್ನ ಮಾಡಿಕೊಂಡು ಸಂಸಾರ ಹೂಡಿದರೂ ಕೊನೆಯವರೆಗೆ ಸಂಶೋಧನದಲ್ಲಿಯೇ ಆಯುಷ್ಯ ಕಳೆದರು. ನನ್ನ ಇತಿಹಾಸ ಮಂಡಲಕ್ಕೆ ಅವರು ಸಂಚಾರಕರಾಗಿ, ಕರ್ನಾಟಕದಲ್ಲೆಲ್ಲ ಜಾಗ್ರತಿ ಮಾಡಿದರು. ಅವರು ಒಳ್ಳೇ ವಕ್ತಾರರು, ಖಂಡ ತುಂಡ ಮಾತಾಡುವವರು. ಕರ್ನಾಟಕತ್ವದಲ್ಲಿ ಅವರು ನನಗೆ ತುಂಬಾ ಸಹಾಯ ಮಾಡಿದರು. ಹೀಗೆ, ನನ್ನ ಆಯುಷ್ಯದಲ್ಲಿ ನನಗೆ ಅತ್ಯಂತ ಸಮೀಪದ ಆಪ್ತರಂತಿದ್ದ ಅವರು ದೇಶಸೇವೆಯಲ್ಲಿಯೇ, ದೇಹ ಸವೆಸಿ ವೈಕುಂಠ ವಾಸಿಗಳಾದರು. ಈ ಸಂದರ್ಭದಲ್ಲಿ ನಾನು ಅವರಿಗೆ ಅತ್ಯಂತ ಗೌರವಪೂರ್ವಕವಾಗಿ ನನ್ನ ಶ್ರದ್ಧಾಂಜಲಿಗಳನ್ನು ಅರ್ಪಿಸುತ್ತೇನೆ.

ಧಾರವಾಡ
೭–೧–೫೮

ಆಲೂರ ವೆಂಕಟರಾಯ

oooo

# ನಾಲ್ಕು ಮಾತು

ದಿವಂಗತ ನಾರಾಯಣ ಶ್ರೀನಿವಾಸ ರಾಜಪುರೋಹಿತ ಅವರ ಚರಿತ್ರ ಮತ್ತು ಕಾರ್ಯ ಇವುಗಳನ್ನು ಕುರಿತು ಶ್ರೀ ಹಾವನೂರ ಅವರು ಬರೆದ ಪುಸ್ತಕದ ನಿಮಿತ್ತದಿಂದ ಚರಿತ್ರ ನಾಯಕರ ಬಗ್ಗೆ ನಾಲ್ಕು ಮಾತುಗಳನ್ನು ಬರೆಯುತ್ತಿದ್ದೇನೆ. ದಿವಂಗತ ರಾಜಪುರೋಹಿತರು ನನಗೆ ವಯಸ್ಸಿನಿಂದ ಹಿರಿಯರು. ಅವರು ನಮ್ಮ ಊಟದ ಮನೆಯಲ್ಲಿ ಊಟ ಮಾಡಿಕೊಂಡು, ಇದುರಿನ ಶ್ರೀ. ಆಲೂರ ವೆಂಕಟರಾಯರ ಮನೆಯಲ್ಲಿ ನಿವಾಸವಿಟ್ಟು, ಹಗಲೆಲ್ಲವನ್ನೂ ನಮ್ಮ ಮನೆಯ ಬಡಿಯ ಆಟ್ಟದ ಮೇಲೆ ವಾಚನಾಲಯದಲ್ಲಿ ವಿದ್ಯಾ ವ್ಯಾಸಂಗದಲ್ಲಿ ಕಾಲ ಕಳೆಯುತ್ತಿದ್ದರು. ಆ ಕಾಲವೆಂದರೆ ರಾಷ್ಟ್ರೀಯ ಚಳವಳಿಯ ದಿನಗಳು. ಅವರು ಶ್ರೀ. ಆಲೂರವರ ರಾಷ್ಟ್ರೀಯ ವಿದ್ಯಾಲಯಕ್ಕೆ ಶಿಕ್ಷಕರೆಂದು ಬಂದರು. ಆ ವಿದ್ಯಾಲಯವು ಹೇಗೋ ಮುಗಿತಾಯಗೊಂಡರೂ ಅವರ ವಿದ್ಯಾ ವ್ಯಾಸಂಗವು ಮಾತ್ರ ಮುಮ್ಮಡಿ ಉತ್ಸಾಹದಿಂದ ಮುಂದೆ ಸಾಗಿತ್ತು. ಮಹಾರಾಷ್ಟ್ರ, ಬಂಗಾಲ ಈ ದೇಶದೊಳಗಿನ ಚಟುವಟಿಕೆಗಳ ಬಗ್ಗೆ ಅವರಿಗೆ ತುಂಬಾ ಆದರವಿತ್ತು. ಇತಿಹಾಸ ಸಂಶೋಧನದ ಪೂರ್ವ ಸಿದ್ಧತೆಯನ್ನು ಆವರ ವಾಚನಾಲಯದ ಗರುಡಿಯಲ್ಲಿ ಮಾಡಿದರು. ರಾಜಪುರೋಹಿತರು, ಮಿತ ಭಾಷಿಗಳು, ಏಕಾಂತವಾಸ ಪ್ರಿಯರು, ಚಿಂತನ ಶೀಲರು. ಅವರು ಹತ್ತು ಜನರಲ್ಲಿ ನಗುವಾಗಲು ಮುಖ ಕೆಳಗೆ ಹಾಕಿ, ಪ್ರಹಾಸ್ಯವೆನಿಸದಂತೆ 'ಸ್ಮಿತ' ಮಾಡುತ್ತಿದ್ದರು. ಅವು ಅವರ ಬ್ರಹ್ಮಚರ್ಯದ ನಿಶ್ಶಾಂತ ದಿನಗಳು. ಈ ಕಾಲದಲ್ಲಿಯೇ ಅವರು ವಿದ್ಯಾರಣ್ಯ ಪ್ರಬಂಧ, 'ದಾನಧರ್ಮಪದ್ಧತಿ'ಗಳನ್ನು ಸಜ್ಜುಗೊಳಿಸಿದರು.

ನಮ್ಮ ಅಜ್ಜಿ ತೀರಿಕೊಂಡ ಮೇಲೆ, ಅದೇ ಕಾಲಕ್ಕೆ ನಾನು ಮ್ಯಾಟ್ರಿಕ್ಯುಲೇಶನ ಮುಗಿಸಿದ್ದರಿಂದ ನಮ್ಮ ಚಿಕ್ಕಪ್ಪನಿದ್ದ ಪೂನಾ ಪಟ್ಟಣಕ್ಕೆ ಮುಂದಿನ ವಿದ್ಯಾಭ್ಯಾಸಕ್ಕಾಗಿ ಹೋದೆ. ರಾಜಪುರೋಹಿತರೂ ಬೇಗನೆ ಧಾರವಾಡ ಬಿಟ್ಟು, ಬಡೋದಾ, ಕಾಶೀ ಮೊದಲಾದ ವಿದ್ಯಾಸ್ಥಾನಗಳಲ್ಲಿ ಕೆಲ ಕಾಲ ಕಳೆದು, ಸ್ವಲ್ಪ ತೀರ್ಥಯಾತ್ರೆಯನ್ನೂ ಮಾಡಿ ಗೃಹಸ್ಥನಾಗುವ ವಿಚಾರದಿಂದ ಸ್ವದೇಶದತ್ತ ಮರಳಿದರು. ಮಧ್ಯೇ ಪೂನಾಕ್ಕೂ ಬಂದರು. ನಾನಾಗ

ಇನ್ನೂ ಪ್ರೂಸಾದಲ್ಲಿದ್ದೆ. ಧಾರವಾಡದಲ್ಲಿ ಶ್ರೀ ಆಲೂರವರು ಆ ಕಾಲಕ್ಕೆ 'ಗತವೈಭವ' ಬರೆಯುವದರಲ್ಲಿ ತೊಡಗಿದ್ದರು. ರಾಜಪುರೋಹಿತರ 'ಕರ್ನಾಟಕ-ಮಹಾರಾಷ್ಟ್ರ'ವೆಂಬ ಲೇಖ ಮಾಲೆಗೆ ಕಾರಣವಾಯಿತು- ಈ ಪೂನಾದ ಸಂದರ್ಶನ. ಆಪ್ಟೇ, ಪೋದ್ದಾರ, ರಾಜವಾಡೇ, ಚಾಂದೋರಕರ, ಮೊದಲಾದ ಇತಿಹಾಸಾಭಿಜ್ಞರ ಮೈತ್ರಿಯೂ ಆಯಿತು. ಮುಂದೆ ಅವರು ಧಾರವಾಡದತ್ತ ತೆರಳಿ, ಸ್ವಗ್ರಾಮದಲ್ಲಿಯೂ ವ್ಯವಸ್ಥೆಮಾಡಿ, ಮೈಸೂರು ರಾಜ್ಯದಲ್ಲಿ ವಿವಾಹ ಮುಗಿಸಿ, ಅಲ್ಲಿಯೆ ಕೆಲಸಕ್ಕೆ ಸೇರಿದರು. ಸರ್ ಎಮ್. ವಿಶ್ವೇಶ್ವರಯ್ಯನವರ ದಿವಾನಗಿರಿಯಲ್ಲಾದ ಹಳ್ಳಿಯ ವಾಚನಾಲಯಗಳ ಚಳವಳಿಯಲ್ಲಿ ದುಡಿದರು. ಆ ಕೆಲಸವು ಬಹಳ ವರ್ಷ ಅವರಿಗೆ ಆಶ್ರಯ ಕೊಡಲಿಲ್ಲ. ಇತ್ತ ನಾನು ಬೀ. ಏ. ಮುಗಿಸಿ, ವ್ಹಿಕ್ಟೋರಿಯಾ ಹಾಯಸ್ಕೂಲಿನಲ್ಲಿ ಕೆಲಸ ಮುಗಿಸಿ, ರಾಷ್ಟ್ರೀಯ ವಿದ್ಯಾಲಯದಲ್ಲಿ ಗೆಳೆಯರೊಡನೆ ಸೇರಿಕೊಂಡಿದ್ದೆ. ರಾಜಪುರೋಹಿತರೂ ರಾಷ್ಟ್ರೀಯ ವಿದ್ಯಾಲಯದಲ್ಲಿಯೂ, ಧಾರವಾಡದ ವನಿತಾ ಸೇವಾ ಸಮಾಜದಲ್ಲಿಯೂ, ಕೆಲವು ವರ್ಷ ಶಿಕ್ಷಕರಾಗಿ ಕಳೆದರು. ಈ ವರ್ಷಗಳಲ್ಲಿ ಅವರು ಅದ್ವೈತ ವೇದಾಂತದ, ಅದರಲ್ಲೂ ಪಂಚದಶಿಯ ಅಭ್ಯಾಸ, ಶ್ರೀ ಅರವಿಂದ ಘೋಷರ ವಾಙ್ಮಯ ಅವಲೋಕನವನ್ನು ಮಾಡಿದ್ದಲ್ಲದೆ, ಹಲ ಕೆಲವು ಕನ್ನಡ ಕವಿಗಳ ಕಾಲ ನಿರ್ಣಯ ವಿಚಾರದಲ್ಲಿ ಶ್ರಮಪಟ್ಟರು. ಅವರು ಸಾಹಿತ್ಯ ಪರಿಷತ್ತಿನ ಹಾಗೂ ಸಂಮೇಲನದ ಪ್ರಾರಂಭದ ಭಕ್ತಗಣದಲ್ಲೊಬ್ಬರಾಗಿದ್ದರು. ಶ್ರೀಗಳಾದ ಅಚ್ಯುತರಾವ ಹುಯಿಲಗೋಳ, ಸ. ಪ. ಗಾಂವಕರ, ನಾರಾಯಣ ಶರ್ಮಾ, ಪಂಡಿತ ಪೂಜಾರ ಇವರಲ್ಲದೆ ಗಳಗನಾಥ, ತಲ್ಲಕ ವೆಂಕಣ್ಣಯ್ಯ, ಕೋಟಿ ಶ್ರೀನಿವಾಸರಾವ ಮೊದಲಾದವರೊಡನೆ ಸಾಹಿತ್ಯ ಪ್ರೇಮ, ದೇಶ ಪ್ರೇಮಗಳ ಸಂಬಂಧ ಬೆಳೆಸಿಕೊಂಡು ಬಂದಿದ್ದರು. ಸಾಧನಕೇರಿಯೆಂಬ ಹೆಸರು ಆ ಸ್ಥಳಕ್ಕೆ ರೂಢವಾಗುವ ಪೂರ್ವದಲ್ಲಿ ಅಲ್ಲಿ ವಾರವಾರವೂ ಕಲೆಯುವ ಗೆಳೆಯರಲ್ಲಿಯೂ ಅವರೊಬ್ಬರು. ಇತಿಹಾಸ ಮಂಡಲದ ಕಾರ್ಯಕರ್ತರಾಗಿ ಅವರು ಹಲ ವಿಧದಲ್ಲಿ ಕೆಲಸ ಮಾಡಿದರು. ಕನ್ನಡ ಸಂಶೋಧನ ಸಂಸ್ಥೆಗೂ ನೆರವಾದರು. ಕನ್ನಡ ಚಳವಳಿಯಲ್ಲಿ ವಿರೋಧ ಕಟ್ಟಿಕೊಂಡೂ ತಮ್ಮ ನಿಃಸ್ಪೃಹ ವೃತ್ತಿಯಿಂದ ಹೆಸರುಳಿಸಿಕೊಂಡರು. ಸಾಯಣ, ಯಾಜ್ಞವಲ್ಕ್ಯ, ಮಧ್ವ ಈ ಧಾರ್ಮಿಕ ವ್ಯಕ್ತಿಗಳ ಚರಿತ್ರೆಗಾಗಿ ದುಡಿದು ಹಣ್ಣಾಗಿ, ಸಣ್ಣಾಗಿ ಒಂದು ವಿಧವಾದ ವಾದ ಸರಣಿಯನ್ನು ಬೆಳೆಸಿ,

ಅದೇ ಶೈಲಿಯಲ್ಲಿ ಕನ್ನಡ ಕವಿಗಳ ಕಾಲಮತಗಳ ನಿರ್ಣಯಕ್ಕೆ ಹೆಣಗಾಡಿದರು. ಏಕೀಕರಣ, ಸಂಸ್ಕೃತಿ, ಧರ್ಮ, ಬುದ್ಧಿವಾದ, ಚರಿತ್ರ ಲೇಖನ ಇವುಗಳ ಬಗ್ಗೆ ಸ್ವಯಂ ಪ್ರಚೋದನೆಯಿಂದಲೇ ಕಾರ್ಯಮಾಡುತ್ತ ಕರ್ನಾಟಕದ ನಾಲ್ಕು ಮೂಲೆಗೂ ಹೋಗಿಬಂದರು. ಅವರೊಬ್ಬ ಕರ್ನಾಟಕದ ಯಾತ್ರಿಕರಾಗಿ, ಜನಜೀವನ ನೋಡಿಕೊಂಡು ತಮ್ಮ ಜೀವನದೊಳಗಿನ ಸಂಕಟಗಳಿಗೂ ಎದೆಗೊಟ್ಟು ಬಾಳಿದರು.

ಒಳ್ಳೆಯ ಪತ್ರಿಕೆಯ ಸಂಪಾದಕರಾಗಿ ಆದರ್ಶವೊಂದನ್ನು ರಚಿಸಬೇಕೆಂಬ ಅವರ ಮನೀಷೆ ಈಡೇರಲಿಲ್ಲ. ಬಾಳಿನಲ್ಲಿ ಕಹಿ ಕಂಡರೂ ಅದನ್ನು ವಿವೇಕದಿಂದ ಜೀರ್ಣಿಸಿಕೊಂಡರು. ಅವರ ಕಾರ್ಯತತ್ಪರತೆಯನ್ನು ಮೆಚ್ಚಿಕೊಂಡು ಹಲ ಕೆಲವರು ಅವರಿಗೆ ಸಹಾಯ ಮಾಡಿದರೂ, ಆ ಸಹಾಯ ಅವರ ಸಂಸಾರ ನಿರ್ವಾಹಕ್ಕೆ ಸಾಲಲಿಲ್ಲ. ಅಲ್ಲಲ್ಲಿ ಅವರಿಗೆ ಸನ್ಮಾನವೂ ಆಯಿತು. ದೇಹಾವಸಾನಕಾಲಕ್ಕೆ ಅವರಿಗೆ ಬಹಳ ವಯಸ್ಸಾಗಿತ್ತು ಎಂದು ಹೇಳುವಂತಿಲ್ಲ. ಅವರ ಜೊತೆ ದುಡಿದವರು ಹಲವರಿದ್ದಾರೆ. ಜೀವನದಲ್ಲಾದ ಯಾತಾಯಾತದಿಂದ ಅವರಿಗೆ ಬೇಗನೆ ನೂರು ವರ್ಷಗಳಾದವು.

ಅವರ ಮಗ ಮತ್ತು ಮಗಳು ಸಾಹಿತ್ಯಪ್ರಿಯರಾಗಿದ್ದಾರೆ. ಅದೂ ರಾಜಪುರೋಹಿತರ ತಪಕ್ಕೆ ಫಲವೆಂದೇ ಹೇಳಬಹುದು. ರಾಜಪುರೋಹಿತರು ಹಾವನೂರು ಸೀಮೆಯವರು. ಶ್ರೀ ಹಾವನೂರವರೇ ಅವರ ಚಾರಿತ್ರಿಕ ಶ್ರದ್ಧಾಂಜಲಿಯನ್ನು ಅರ್ಪಿಸುವದು ಉಚಿತವಾಗಿದೆ. ಸಾಹಿತ್ಯ ಸಂಮೇಲನದ ಕಾಲದಲ್ಲಿ ಒಬ್ಬ ಸಾಹಿತ್ಯ ಭಕ್ತನ ಚರಿತ್ರೆಯು ಪ್ರಕಟವಾಗುವದೂ ಸಮಯೋಚಿತವಾಗಿದೆ.

ಸೊಲ್ಲಾಪುರದಲ್ಲಿರುವಾಗ ಅವರು ನನ್ನಲ್ಲಿ ಬಂದಾಗ್ಗೆ ಕಷ್ಟ ಸ್ಥಿತಿಯಲ್ಲಿದ್ದರು. ಜೊತೆಗೆ ಒಬ್ಬ ವಿದ್ಯಾರ್ಥಿಯನ್ನು ಕೊಟ್ಟು ಅವರನ್ನು ಧಾರವಾಡಕ್ಕೆ ಸುರಕ್ಷಿತ ಮುಟ್ಟಿಸುವದಕ್ಕಿಂತ ಹೆಚ್ಚೇನು ನನ್ನಿಂದ ಮಾಡಲಾಗಲಿಲ್ಲ. 'ಮುಂದಾಳಿಲ್ಲದೆ ಹಿಂದುಳಿದ ಕರ್ನಾಟಕ' ಎಂಬ ಒಂದು ನನ್ನ ಲೇಖನವನ್ನು (ಬೇರೆ ಗೆಳೆಯರು ಸಂಮತಿ ಇತ್ತರೂ) ಕೇವಲ ಅವರ ಅಸಂಮತಿಯನ್ನು ಅನುಲಕ್ಷಿಸಿ ನಾನು ಪ್ರಕಟಿಸಲಿಲ್ಲ. ದೇಶ ಹಿತ ವಿಚಾರದಲ್ಲಿ ಅವರ ವಿವೇಕವು ನನಗೆ

ಬಾಲ್ಯದಿಂದಲೂ ಮಾರ್ಗದರ್ಶಕವಾಗಿತ್ತು. ಕೊನೆಯ ದಿನಗಳಲ್ಲಿ ಅವರು ನನ್ನನ್ನೂ ನೆನೆಸಿಕೊಂಡರು ಎಂದು ಅವರ ಚಿರಂಜೀವಿಯಿಂದ ಕೇಳಿದಾಗ ನನ್ನಲ್ಲಿ ಆದ ತಳಮಳ, ಕಳವಳ ಹೇಳಬರದು. ಅಂತೆಯೇ ಈ ಬರೆಹವು ಕೃತಜ್ಞತೆಯ ಶ್ರದ್ಧಾಂಜಲಿಯಾಗಲಿ ಎಂದುಕೊಳ್ಳುತ್ತೇನೆ. ಆದರ್ಶಕ್ಕಾಗಿ ದುಡಿದು, ಯಾವದೋ ತಂತ್ರದ ಅಪದ್ಧತಿಯಿಂದ ಶ್ರಮಿಸಿ, ಜಯಾಪಜಯ ಗಳನ್ನು ಸಮನಾಗಿ ಭೋಗಿಸಿ, ಸ್ವಾಂತಶಾಂತಿಯಿಂದ ದೇಹವಿಡುವವರೂ ಹುತಾತ್ಮ ಸದೃಶರೇ ಸರಿ. ಕನ್ನಡದ ಭಕ್ತ ಮಾಲಿಕೆಯಲ್ಲಿ ನಾರಾಯಣ ಶ್ರೀನಿವಾಸ ರಾಜಪುರೋಹಿತರ ಹೆಸರು ಚಿರಕಾಲವಾಗಿ ಸ್ಮರಣೀಯವಾಗಿ ಉಳಿಯುವದೆಂದು ನಾನು ನಂಬಿದೇನೆ.

ಸಾಧನಕೇರಿ
೨—೧—೫೮

ದ. ರಾ. ಬೇಂದ್ರೆ



## ಆದರಾಂಜಲಿ

ದಿವಂಗತ ನಾ. ಶ್ರೀ. ರಾಜಪುರೋಹಿತರನ್ನು ನಾನು ಹಲವಾರು ವರ್ಷಗಳಿಂದ ಬಲ್ಲವನಾಗಿದ್ದೆನು. ನಾನು ವಿದ್ಯಾರ್ಥಿಯಿದ್ದಾಗ ಅವರನ್ನು ನೋಡಿ, ಅವರ ಉಪನ್ಯಾಸಗಳನ್ನು ಕೇಳಿ ಆಶ್ಚರ್ಯಚಕಿತನಾದೆನು. ಅವರ ಕರ್ನಾಟಕದ ಅಭಿಮಾನ, ಇತಿಹಾಸ ಜ್ಞಾನ ಮತ್ತು ಅಖಂಡ ಜಿಜ್ಞಾಸೆ ಇದರಿಂದ ನಾನು ಸ್ಫೂರ್ತಿ ಪಡೆದೆ. ಪ್ರಾಧ್ಯಾಪಕನಾಗಿ ನಾನು ಇಲ್ಲಿಗೆ ಬಂದ ಮೇಲೆ ಅವರು ಆಗಾಗ ನನ್ನಲ್ಲಿಗೆ ಬರುತ್ತಿದ್ದರು. ಈ ಅವಧಿಯಲ್ಲಿ ನನ್ನ ಅವರ ಪರಿಚಯವು ದೃಢತರವಾಯಿತು.

ಕರ್ನಾಟಕದ ಇತಿಹಾಸದ ಮಟ್ಟಿಗೆ ಅವರು ಸಂಚರಿಸುವ ಜ್ಞಾನ-ಕೋಶವೇ ಆಗಿದ್ದರು. ಸಂಶೋಧನೆಗಾಗಿ ಅವರು ಕರ್ನಾಟಕದ ಎಲ್ಲ ಭಾಗಗಳಿಗೆ ಹೋಗಿ ಬಂದಿದ್ದರು. ಎಲ್ಲೆಲ್ಲಿ ಯಾವ ಸಾಮಗ್ರಿ ದೊರೆಯುತ್ತದೆ

ಎಂಬುದನ್ನು ಅವರು ಕೇಳಿದ ಕ್ಷಣ ಹೇಳುತ್ತಿದ್ದರು. ಕಾಲ, ದೇಶ, ಕುಲ, ಗೋತ್ರ ಈ ವಿವರಗಳಂತೂ ಅವರ ನಾಲಿಗೆ ತುದಿಯ ಮೇಲೆ ಇರುತ್ತಿದ್ದವು. ಅವರ ಸಂಶೋಧನ ದೃಷ್ಟಿ ಯಥಾರ್ಥವಾದುದಾದರೂ ನಿರ್ಣಯ ಪದ್ಧತಿಯಲ್ಲಿ ಆಧುನಿಕತೆ ಕಡಿಮೆಯಾಗಿತ್ತು. ಅದು ಅವರು ಬೆಳೆದು ಬಂದ ಕಾಲ ಮತ್ತು ಪಡೆದ ಶಿಕ್ಷಣದ ಪರಿಣಾಮವೆನ್ನಬಹುದು.

ಕರ್ನಾಟಕ ಇತಿಹಾಸ ಸಂಶೋಧನೆಯ ದಾರಿಯಲ್ಲಿ ಅವರು ಪ್ರಾರಂಭಕಾರರು. ಅವರು ಕಂಡು ಹಿಡಿದ ಸಂಗತಿಗಳಿಂದ ಕನ್ನಡಿಗರಲ್ಲಿ ಇತಿಹಾಸ ಜ್ಞಾನ ಉಂಟಾಯಿತು, ಅಭಿಮಾನ ಜಾಗೃತವಾಯಿತು. ಏಕೀಕೃತ ಕರ್ನಾಟಕದ ಆಂದೋಲನಕ್ಕೆ ಸ್ಫೂರ್ತಿ ದೊರೆಯಿತು. ಅವರಿಂದ ನವ ಕರ್ನಾಟಕದ ತರುಣರು ಸಂಶೋಧನೆ, ಅಭ್ಯಾಸ ಇವುಗಳ ಅಖಂಡ ಸಾಧನೆ ಕೈಕೊಳ್ಳಲು ಪ್ರೇರಣೆ ಹೊಂದಲಿ, ಅವರಿಗೆ ತಮ್ಮ ಋಣ ಸಲ್ಲಿಸಲಿ.

ಸಾಂಗಲಿ<br>೫-೧-೫೮

ರಂ. ಶ್ರೀ. ಮುಗಳಿ

೦೦೦೦

## ತಪಸ್ವಿ

ಸ್ವ. ವಾ ರಾಜಪುರೋಹಿತರೊಬ್ಬರು ಪರಮ ತಪಸ್ವಿಗಳೆಂದು ನಮ್ಮ ಭಾವನೆ. ಹುತ್ತೇರಿ ಚಿತ್ತ ಬೆಳೆದವರಷ್ಟೇ ತಪಸ್ವಿಗಳಲ್ಲ. ಪವಿತ್ರವಾದ ಸಂಕಲ್ಪವನ್ನಿಟ್ಟುಕೊಂಡು ದೊಡ್ಡ ಧ್ಯೇಯ ಸಾಧನೆಗಾಗಿ ತನು ಮನ ಧನಗಳನ್ನು ಸವೆಸುವುದು ಪರಮ ತಪಸ್ಸು. ಶ್ರೀ. ವಾ. ಶ್ರೀ. ರಾಜಪುರೋಹಿತರವರು ಇಂತಹ ಪರಮ ತಪಸ್ವಿಗಳು.

ಐತಿಹಾಸಿಕ ಸಾಧನ ಸಂಪತ್ತಿಯ ಬೀಡಾದ ಕನ್ನಡ ನಾಡಿನಲ್ಲಿ ಶ್ರೀ. ರಾಜಪುರೋಹಿತರವರು ಶ್ರೇಷ್ಠ ಪ್ರತಿಯ ಇತಿಹಾಸ ಸಂಶೋಧಕರಾಗಿ ಬಾಳಿದರು. ಕಲ್ಲು ಕಂಡಲ್ಲೆಲ್ಲ ರಾಜಪುರೋಹಿತರು ಧಾವಿಸಿದರು. ಶಿಲಾಶಾಸನಗಳನ್ನು ಬಯಲಿಗೆ ತರುವಲ್ಲಿ ಅವರು ಪಟ್ಟ ಶ್ರಮ ವರ್ಣನಾತೀತವಾದುದು.

ಅವುಗಳ ಪಾಠಗಳನ್ನು ನಿರ್ಣಯಿಸುವಲ್ಲಿ ಅಷ್ಟೇ ಜಾಣ್ಮೆ, ನಿಷ್ಪಕ್ಷಪಾತ ದೃಷ್ಟಿ ಅವರಲ್ಲಿ ಕಂಡುಬರುತ್ತಿದ್ದವು. ಅವರ ಪ್ರಯತ್ನದ ಫಲವಾಗಿ ಕರ್ನಾಟಕದ ಇತಿಹಾಸದ ಮೇಲೆ ವಿಪುಲವಾದ ಬೆಳಕು ಬಿದ್ದಿದೆಯೆಂದು ನಿಸ್ಸಂದೇಹವಾಗಿ ಹೇಳಬಹುದು.

ಭಾರತೀಯರಿಗೆ ಇತಿಹಾಸ ದೃಷ್ಟಿ ಮೊದಲಿನಿಂದಲೂ ಕಡಮೆಯೆಂದರೆ ಯಾರೂ ಕೋಪಿಸುವ ಕಾರಣವಿಲ್ಲ. ನಮ್ಮದು ಪೌರಾಣಿಕ ದೃಷ್ಟಿ. ಪವಾಡಗಳನ್ನು ಅಂಕುರಿಸಿ, ಪಲ್ಲವಿಸಿ, ಫಲವಾಗುವಂತೆ ಮಾಡುವ ಶಕ್ತಿಯನ್ನು ನಮ್ಮವರು ಪಡೆದು ಬಂದಿದ್ದರು; ಅದರಂತೆ ಅವರು ನಡೆದು ತೋರಿದರು. ಆಧುನಿಕ ಯುಗದಲ್ಲಿ ಇತಿಹಾಸದ ಮಹತ್ವವನ್ನು ಅರಿಯತೊಡಗಿದ್ದೇವೆ. ನಮ್ಮ ನಾಡು ನುಡಿಗಳ ಇತಿಹಾಸ ಜ್ಞಾನ ನಮಗಾಗದೆ ನಮ್ಮ ಪ್ರಗತಿಯಾಗದೆಂಬ ಅರಿವೂ ಉಂಟಾಗತೊಡಗಿದೆ. ಅಂತೆಯೇ ಅವುಗಳ ರಚನೆಯ ಮಹಾ ಕಾರ್ಯ ಭಾರತದ ಎಲ್ಲ ಭಾಷೆಗಳಲ್ಲಿಯೂ ನಡೆದಿದೆ.

ಈ ದೃಷ್ಟಿಯಿಂದ ವಿಚಾರಿಸಿದಾಗ ಶ್ರೀ ರಾಜಪುರೋಹಿತರವರನ್ನು ಕಳೆದುಕೊಂಡುದರಿಂದ ಕರ್ನಾಟಕಕ್ಕೆ ದೊಡ್ಡ ಹಾನಿಯಾಗಿದೆ. ಜೀವನವನ್ನೇ ಕರ್ನಾಟಕದ– ಭಾರತದ – ಇತಿಹಾಸಕ್ಕಾಗಿ ಧಾರೆಯೆರೆದ ರಾಜಪುರೋಹಿತರಂತಹ ಪುಣ್ಯ ಪುರುಷರು ದೊರೆಯುವದು ವಿರಳ.

ಅರೆ ಹೊಟ್ಟೆ, ಅರೆ ಬಟ್ಟೆ. ಪೂರ್ಣ ದೃಷ್ಟಿಯಿಂದ ಕೊನೆಯ ವರೆಗೂ ಸತ್ಯಾನ್ವೇಷಣೆಯಲ್ಲಿಯೇ ಶ್ರೀ. ರಾಜಪುರೋಹಿತರವರು ಕಾಲ ಕಳೆದರು. ಅವರು ಪಟ್ಟ ಕಷ್ಟವನ್ನು ನೆನೆದರೆ ಕಣ್ಣೀರು ತಾನೇ ಹರಿಯುತ್ತದೆ. ಒಂದು ಜೀವನ ತನ್ನ ಪಾಲಿನ ಕರ್ತವ್ಯವನ್ನು ನೆರವೇರಿಸಿ ಕೃತಾರ್ಥವಾಯಿತೆಂಬ ಸಮಾಧಾನವು ಉಂಟಾಗುತ್ತದೆ.

ನಮ್ಮ ನಾಡಿನ ಇತಿಹಾಸ ಸಂಶೋಧನೆಗಾಗಿ ಜೀವನವನ್ನು ತೆತ್ತ ಶ್ರೀ ನಾ. ಶ್ರೀ. ರಾಜಪುರೋಹಿತರವರು ನಮ್ಮ ಇತಿಹಾಸದಲ್ಲಿ ಸಂಸ್ಮರಣೀಯರು. ಅವರಿಗೆ ನನ್ನ ಶ್ರದ್ಧಾಂಜಲಿಯನ್ನರ್ಪಿಸುತ್ತೇನೆ.

ಧಾರವಾಡ
೭–೧–೧೯೫೪

ಆರ್. ಸಿ. ಹಿರೇಮಠ

# ನಾ ಕಂಡ ರಾಜಪುರೋಹಿತರು

ನನ್ನ ಸಂಶೋಧಕ ಜೀವನದಲ್ಲಿ ದಿವಂಗತ ರಾಜಪುರೋಹಿತರಿಗೆ ಒಂದು ಸ್ಮರಣೀಯ ಸ್ಥಾನವಿದೆ. ನನ್ನ ಮತ್ತು ಅವರ ನಡುವೆ ಬೆಳೆದ ಸಂಬಂಧ ಕೇವಲ ಸಾಮಾನ್ಯಾಂಶಗಳಿಂದ ಕೂಡಿತ್ತು ಎಂದು ಹೇಳಲಿಕ್ಕಾಗದು. ಆದರೂ ನನಗೊಂದು ಸ್ಪೃಹಣೀಯ ಆದರ್ಶವಾಗಿ ತೋರಿತು.

ರಾಜಪುರೋಹಿತರಲ್ಲಿ ನಿರಂತರ ಜ್ವಲಿಸುತ್ತಿದ್ದ ಜಿಜ್ಞಾಸುತ್ವ ಮತ್ತು ಚಿಕಿತ್ಸಕ ಪ್ರಜ್ಞೆ, ಇವು ನನ್ನನ್ನು ಅವರೆಡೆಗೆ ಒಲಿಯುವಂತೆ ಮಾಡಿದುವು. ನನಗಿಂತ ಹಿರಿಯರೂ ಹಿಂದಿನ ತಲೆಮಾರಿನವರೂ ಆದ ಅವರ ವಿಷಯದಲ್ಲಿ ನನಗೆ ಆದರಭಾವನೆ ಇರುವ್ರದು ಸ್ವಾಭಾವಿಕ. ಆದರೆ ಸಂಶೋಧಕನ ಭೂಮಿಕೆಯಿಂದ ಅವರಲ್ಲಿ ನೆಲಸಿದ್ದ ಕೆಲವು ಮೇಲ್ಮಟ್ಟದ ಸದ್ಗುಣಗಳು ಹಲವು ವಿಧದಿಂದ ನನ್ನ ವಿಚಾರಗಳಿಗೆ ಪ್ರಚೋದನೆ ನೀಡಿದವು.

ಸುಮಾರು ೨೫ ವರ್ಷ ಹಿಂದಿನ ಮಾತು. ನಾನಾಗ ವಿದ್ಯಾರ್ಥಿದೆಸೆ ಯಲ್ಲಿ ಇದ್ದೆನು. ದೇಹಾಲಸ್ಯದ ಮೂಲಕ ಕಾಲೇಜಿನ ವಿದ್ಯಾಭ್ಯಾಸವನ್ನು ಕೆಲ ಕಾಲ ಸ್ಥಗಿತಗೊಳಿಸಿ ಕುಕನೂರ ಗ್ರಾಮದಲ್ಲಿ ವಿಶ್ರಾಂತಿ ಹೊಂದುತ್ತಿದ್ದೆನು. ಈ ಗ್ರಾಮದಲ್ಲಿ ಅನೇಕ ಶಿಲಾಶಾಸನಗಳಿವೆ. ನಾನು ಕೂಡುತ್ತಿದ್ದ ಆಡ್ಡಾಡು ತ್ತಿದ್ದ ಎಡೆಗಳಲ್ಲಿ ಕೈಯೆತ್ತಿ ಕಣ್ಣು ಬಿಡುವಂತೆ ನಿಂತಿದ್ದ ಪುರಾತನ ಯುಗದ ಈ ಕಲ್ ಬರೆಹಗಳನ್ನು ನೋಡಿ ನೋಡಿ ಅವುಗಳನ್ನು ಓದಿ ಅರಿತುಕೊಳ್ಳುವ ಕುತೂಹಲ ನನ್ನಲ್ಲಿ ಕೆರಳಿತು. ಮುಖ್ಯವಾಗಿ ಸ್ವ ಪ್ರಯತ್ನದಿಂದ ಅವುಗಳನ್ನು ಅಭ್ಯಸಿಸತೊಡಗಿದೆನು.

ಆ ಸಮಯಕ್ಕೆ ರಾಜಪುರೋಹಿತರು ಕುಕನೂರಿಗೆ ಆಗಮಿಸಿದರು. ಅವರ ಪರಿಚಯದ ಸುಯೋಗ ಒದಗಿತು. ಅವರ ಅನುಭವದ ಲಾಭವನ್ನು ಪಡೆಯಲು ಅಪೇಕ್ಷಿಸಿದೆನು. ಅವರ ಜೊತೆಯಲ್ಲಿ ಪಕ್ಕದ ಒಂದೆರಡು ಗ್ರಾಮಗಳಿಗೆ ಹೋದೆನು. ಶಿಲಾಲೇಖಗಳ ವಾಚನ-ಮುದ್ರಣ ಕಾರ್ಯದಲ್ಲಿ ಅವರಿಗೆ ಸಹಾಯಕನಾದೆನು.

ಈ ಮೈತ್ರಿ ನನ್ನಲ್ಲಿ ಹೆಚ್ಚಿನ ಉತ್ಸಾಹ ಮತ್ತು ಆತ್ಮ ವಿಶ್ವಾಸಕ್ಕೆ ಕಾರಣ ವಾಯಿತು. ಮುಂದೆ ನಾನು ಆ ಕ್ಷೇತ್ರದಲ್ಲಿ ಸ್ವತಂತ್ರವಾಗಿ ದೂರ

ದೂರದ ಗ್ರಾಮಗಳಿಗೆ ಪ್ರಯಾಣ ಮಾಡಿ ಹೊಸ ಹೊಸ ಶಾಸನಗಳನ್ನು ಸಂಗ್ರಹಿಸಿದೆನು. ಅವುಗಳ ವ್ಯಾಸಂಗದಲ್ಲಿ ಒಂದು ಪರಿಯಿಂದ ಪರಿಣತಿಯನ್ನು ಸಂಪಾದಿಸಿದೆನು.

೧೯೩೨ ರಿಂದ ಮುಂದೆ ೫-೬ ವರ್ಷಗಳ ವರೆಗೆ ವಿದ್ಯಾರ್ಜನೆಗಾಗಿ ನಾನು ಧಾರವಾಡದಲ್ಲಿ ವಾಸಿಸುವ ಸಂದರ್ಭ ಉಂಟಾಯಿತು, ಈ ಕಾಲದಲ್ಲಿ ನನಗೆ ರಾಜಪುರೋಹಿತರ ಸಮಾಗಮ ಪುನಃ ಪುನಃ ಲಭಿಸುವಂತಾಯಿತು. ಈ ನಮ್ಮ ಸಂದರ್ಶನಗಳಲ್ಲಿ ನಾವು ಚರ್ಚಿಸಿದ ವಿಷಯಗಳು ಒಂದಲ್ಲ, ಎರಡಲ್ಲ. ರಾಜಪುರೋಹಿತರು ಆಗಾಗ ಅನ್ವೇಕ್ಷಣ ಸಂಚಾರ ಮಾಡುತ್ತಿದ್ದರು. ತಮ್ಮೀ ಸಂಚಾರಗಳಲ್ಲಿ ತಾವು ಕಂಡ ವಿಷಯಗಳನ್ನು ನನ್ನ ಮುಂದೆ ಪ್ರಸ್ತಾವಿಸುತ್ತಿದ್ದರು.

ರಾಜಪುರೋಹಿತರು ಬಹುಶ್ರುತರು. ಯಾವುದೇ ಒಂದು ವಿಷಯವನ್ನು ಪ್ರತಿಪಾದಿಸುವ ಪೂರ್ವದಲ್ಲಿ ಸಾಧಕ ಬಾಧಕ ವಿಧಾನದಿಂದ ಅದನ್ನು ಪರೀಕ್ಷಿಸುವುದು ಅವರ ಪದ್ಧತಿ ಆಗಿತ್ತು. ಈ ಉದ್ದೇಶ ಸಾಧನೆಗಾಗಿ ಗ್ರಂಥಾವಲೋಕನ, ಅನ್ವೇಷಣ ಸಂಚಾರ, ತಜ್ಞರೊಡನೆ ವಿಚಾರ ವಿನಿಮಯ, ಬಾರಿ ಬಾರಿಗೂ ವಿಚಾರ ವಿಮರ್ಶೆ ಮತ್ತು ಚರ್ಚೆ, ಇವು ಅವರು ಅವಲಂಬಿಸುವ ಕ್ರಮಗಳಾಗಿದ್ದುವು. ಅನ್ಯರ ಅಭಿಪ್ರಾಯಗಳನ್ನು ಅವರು ಎಷ್ಟೊಂದು ಕೇಳಿದರೂ ತಮ್ಮದೇ ಆದ ಅಭಿಪ್ರಾಯ ಅವರಿಗೆ ಇದ್ದೇ ಇರುತ್ತಿತ್ತು.

ನಾನು ತಿಳಿದುಕೊಂಡಂತೆ, ಲೇಖಕ ಮತ್ತು ಗ್ರಂಥಕಾರರೆಂದು ಮಾತ್ರವಲ್ಲ, ಆಧುನಿಕ ಕರ್ನಾಟಕದ ಆರಂಭ ಕಾಲದಲ್ಲಿ ಕರ್ನಾಟಕದ ಚರಿತ್ರೆ, ಇತಿಹಾಸ ಮತ್ತು ಸಂಶೋಧನ ಈ ವಿಷಯಗಳಲ್ಲಿ ಜನಜಾಗೃತಿಯನ್ನು ಸೃಜಿಸಿದ ಕರ್ಮಯೋಗಿ ಎಂಬ ಶ್ರೇಯಸ್ಸಿಗೆ ರಾಜಪುರೋಹಿತರು ಅರ್ಹರು. ಇತಿಹಾಸ ಸಂಶೋಧನ ಮತ್ತು ಪ್ರಚಾರಕ್ಕಾಗಿ ರಾಜಪುರೋಹಿತರು ಕರ್ನಾಟಕದ ಅನೇಕ ಭಾಗಗಳಲ್ಲಿ ಮತ್ತೆ ಮತ್ತೆ ಸಂಚರಿಸಿದರು. ತಮ್ಮ ಉಪನ್ಯಾಸಗಳಿಂದ, ಕರ್ನಾಟಕಕ್ಕೆ ಅಭಿಮಾನಾಸ್ಪದ ಇತಿಹಾಸವಿದೆ, ಚರಿತ್ರಾರ್ಹ ಮಹಾ ಮಹನೀಯರು ಕರ್ನಾಟಕದಲ್ಲಿ ಉದಿತೋದಿತರಾಗಿದ್ದರು, ಎಂಬ ಸೊಲ್ಲು ಇನ್ನೂ ಅರೆನಿದ್ದೆಯಲ್ಲಿದ್ದ ಜನಗಳ ಕಿವಿಗೆ ಬೀಳುವಂತೆ ಮಾಡಿದರು. ರವಿ ಇನ್ನೂ ಮೂಡುವುದರಲ್ಲಿ ಇದ್ದಾನೆ, ಕತ್ತಲೆ ಕವಿದಿದೆ. ಯಾವುದೋ ಒಂದು ಮರದ ಕೊಂಬೆಯಮೇಲೆ ಕುಳಿತು ಕೋಗಿಲೆ ಕೂಗುತ್ತದೆ. ಆ

ದನಿಯು ಇಂಪು ಒಬ್ಬೊಬ್ಬರಿಗೆ ಕೇಳಿದರೆ ಅವರು ಎಚ್ಚರಗೊಳ್ಳುತ್ತಾರೆ. ರಾಜಪುರೋಹಿತರ ಐತಿಹಾಸಿಕ ಪ್ರಚಾರ ಕಾರ್ಯವನ್ನು ಇಂತಹದೊಂದು ಕುಕಿಲಿಗೆ ಹೋಲಿಸಬಹುದು.

ರಾಜಪುರೋಹಿತರ ಕಾರ್ಯನಿಷ್ಠೆ ಕಟ್ಟು ನಿಟ್ಟಿನದಾಗಿತ್ತು. ಅವರ ಕರ್ಮಯೋಗವನ್ನು ನೆನೆದಾಗೆಲ್ಲ ನನ್ನ ಕಣ್ಣುಮುಂದೆ ಮೂರು ಚಿತ್ರಗಳು ಬಂದು ನಿಲ್ಲುತ್ತವೆ. ಒಂದು, ಪಂಢರಪುರದ ವಾರಕರಿ, ಎರಡು ಹರಿದಾಸ, ಮೂರು, ಶಿವಶರಣ. ಈ ಭಕ್ತಜನರು ತಮ್ಮ ಇಷ್ಟದೇವನ ಅಗಲಿಕೆಯನ್ನು ಸಹಿಸಲಾರರು. ಅವರಿಗೆ ನಿತ್ಯ ಆತನ ನಿದಿಧ್ಯಾಸವೇ ನಿದಿಧ್ಯಾಸ. ಆತನ ಸಂದರ್ಶನಕ್ಕಾಗಿ ಅವರು ದೂರ ದೂರ ಸಂಚಾರ ಮಾಡುವರು; ಪಾದಯಾತ್ರೆಗಳನ್ನು ಕೈಕೊಂಡು ದಣಿಯುವರು. ಆತನ ನಾಮ ಘೋಷ ಮಾಡುವರು; ತಾಳ ಹಾಕುವರು; ಮೇಳವನ್ನು ಕೂಡಿಸುವರು. ಅವರಿಗೆ ಒಮ್ಮೊಮ್ಮೆ ಸ್ವಾಗತ ದೊರೆಯುತ್ತದೆ; ಒಮ್ಮೊಮ್ಮೆ ದೊರೆಯುವುದಿಲ್ಲ. ಒಂದು ದಿನ ಮಿಷ್ಟಾನ್ನ ಭೋಜನ; ಮತ್ತೊಂದು ದಿನ ನಿರಶನ. ಈ ದ್ವಂದ್ವದಿಂದ ಅವರ ಉಪಾಸನಾ ಮಾರ್ಗದಲ್ಲಿ ಅಡೆತಡೆಗಳು ಉಂಟಾಗುವುದಿಲ್ಲ. ಅವಿರತವಾಗಿ ತಮ್ಮ ಗುರಿಯತ್ತ ಸಾಗುವುದೇ ಅವರ ಜೀವನದ ಗುರಿ.

ರಾಜಪುರೋಹಿತರು ಧ್ಯೇಯವಾದಿ. ಧ್ಯೇಯವಾದಿ ಐಹಿಕ ಸುಖ ಸೌಕರ್ಯಗಳಿಗೆ ಎರವಾಗಬೇಕಾಗುತ್ತದೆ. ಕೇವಲ ವ್ಯಾವಹಾರಿಕ ಸೌಖ್ಯಗಳನ್ನು ಬೆಂಬತ್ತಿದವನು ಧ್ಯೇಯವನ್ನು ಸಾಧಿಸಲಾರನು. ರಾಜಪುರೋಹಿತರು ತಮ್ಮ ಬದುಕಿನಲ್ಲಿ ಒಂದು ಆದರ್ಶವನ್ನು ಮುಂದಿಟ್ಟುಕೊಂಡು ಅದರ ಸಾಧನೆಗಾಗಿ ಸುದೀರ್ಘ ಕಾಲದವರೆಗೆ ಕಷ್ಟ ನಿಷ್ಠುರಗಳನ್ನು ಎದುರಿಸಿದರು. ದಾರಿದ್ರ್ಯದ ಅಂಧಕಾರದಲ್ಲಿಯೇ ಹೊತ್ತಿದ ಅವರ ಜೀವನ ದೀಪ ಅನ್ಯರಿಗೆ ಬೆಳಕನ್ನು ತೋರಿದರೂ ತಾನು ಮಾತ್ರ ಕೆಚ್ಚಿನ ಸ್ನೇಹದ ತೈಲವನ್ನು ಉರಿಸಿ ಅದೇ ಕತ್ತಲೆಯಲ್ಲಿ ಲೀನವಾಯಿತು. ಬುದ್ಧಿಯಿಂದ ಕರ್ಮ ಕೌಶಲ್ಯದಿಂದ ಅವರಿಗಿಂತ ಕೆಳಮಟ್ಟದಲ್ಲಿ ಇರುವ ಜನಗಳು ನಮ್ಮ ಸಮಾಜದ ಲೌಕಿಕ ರಂಗದಲ್ಲಿ ಮೇಲಿನ ಅಂತಸ್ತನ್ನೂ ಭೋಗಗಳನ್ನೂ ಪಡೆದಿರುವಾಗ, ಮನಸ್ಸು ಮಾಡಿದ್ದರೆ ಇಂತಹ ಭದ್ರತೆಯ ಬಾಳನ್ನು ಗಳಿಸುವುದು ರಾಜಪುರೋಹಿತರಿಗೆ ಅಸಾಧ್ಯವಾಗಿರಲಿಲ್ಲ.

ರಾಜಪುರೋಹಿತರಲ್ಲಿ ವೈಗುಣ್ಯಗಳು ಇದ್ದಿರಬಹುದು. ಅವು ಯಾರಲ್ಲಿ ಇಲ್ಲ? ವೈಗುಣ್ಯಗಳನ್ನೇ ನೋಡುವಂತಹ ಕೆಲವರಿಗೆ ಅವು ದೊಡ್ಡವಾಗಿಯೂ ಕಾಣಬಹುದು. ಆದರೆ ಅವರ ಜೀವನದ ತಿರುಳು ಇಂತಹ ವೈಗುಣ್ಯಗಳನ್ನು ಮಿಕ್ಕಿ ಮೀರಿ ಬಾಳಿದ್ದ ಒಂದು ತತ್ತ್ವ ಸಾಧನೆಯಲ್ಲಿ ಕೇಂದ್ರೀಕೃತವಾಗಿತ್ತು.

ಸಾಮಾನ್ಯರಿಗಿಂತ ವಿಶೇಷ ತರಗತಿಯ ಬದುಕನ್ನು ಕಂಡ ವ್ಯಕ್ತಿ ಉಚ್ಚ ಭಾವದಿಂದ ತನ್ನ ಸಮಾಜಕ್ಕಾಗಿ ಶ್ರಮಿಸುತ್ತಾನೆ, ಸರಿಪಡಿಸುತ್ತಾನೆ. ಇಂಥ ವ್ಯಕ್ತಿಗೆ ಹಿತಸಂರಕ್ಷಣೆ ನೀಡುವುದು ಸುಶಿಕ್ಷಿತ ಸಮಾಜ ಮತ್ತು ಪ್ರಭುತ್ವದ ಕರ್ತವ್ಯಗಳಲ್ಲಿ ಒಂದಾಗುತ್ತದೆ. ಆದರೆ ಸಾಮಾಜಿಕ ಮತ್ತು ರಾಜಕೀಯ ಪರಿಸ್ಥಿತಿ ವಿಷಮತೆಯಿಂದ ಕೂಡಿದಾಗ ಇಂಥ ಬೆಲೆಗಳು ತಲೆಕೆಳಗಾಗುತ್ತವೆ. ಇಂತಹ ಒಂದು ವಿಷಮತೆಯಲ್ಲಿ ರಾಜಪುರೋಹಿತರು ಬದುಕಿನ ದಾರಿಯನ್ನು ತುಳಿದರು. ಈ ವಿಷಮತೆಗೆ, ಅವರ ಬದುಕಿನ ಕ್ಲೇಶ ಕಾರ್ಪಣ್ಯಗಳಿಗೆ ಹೊಣೆಗಾರರು ಯಾರು? ಈ ಪ್ರಶ್ನೆಗೆ ಉತ್ತರ ಹೇಳುವುದು ಸುಲಭವಾಗಿಲ್ಲ; ಬಲೀಯಸೀ ಕೇವಲ ಮೀಶ್ವರೇಚ್ಛಾ.

ರಾಜಪುರೋಹಿತರ ಬಾಳಿನ ಕಲ್ಲು–ಮುಳ್ಳುಗಳನ್ನು ನೆನೆದಾಗ ನನ್ನ ಎದೆ ಮಿಡಿಯುತ್ತದೆ. ಕಣ್ಣು ತುಂಬಿ ಕಂಬನಿ ನಿಲ್ಲುತ್ತದೆ. ಅವರ ತ್ಯಾಗಮಯ ಜೀವನದ ಪುಣ್ಯ ಸ್ಮೃತಿಗೆ, ಇದೋ ನನ್ನದೊಂದು ಬಾಷ್ಪಾಂಜಲಿ!

ಧಾರವಾಡ<br>೨–೧–೫೮

**ದೇಸಾಯಿ ಪಾಂಡುರಂಗರಾಯ**



## ಮರೆಯಲಾಗದು

ದಿವಂಗತ ಶ್ರೀ ನಾ. ಶ್ರೀ. ರಾಜಪುರೋಹಿತರ ಜೀವನ ಪರಿಚಯ ಮಾಡಿಕೊಡುವ ಪುಸ್ತಕವೊಂದನ್ನು ಶ್ರೀ ಹಾವನೂರ ಶ್ರೀನಿವಾಸರಾಯರು ಅನುಗೊಳಿಸಿ, ಅಚ್ಚುಹಾಕಿಸುತ್ತಿರುವರೆಂದು ಕೇಳಿ ನನಗೆ ಆನಂದವಾಯಿತು. ಶ್ರೀ ಹಾವನೂರರ ಪರಿಚಯ ನನಗಿಲ್ಲ. ಆದರೂ ಅವರು ಕೈಕೊಂಡಿರುವ ಸ್ತುತ್ಯ ಕಾರ್ಯಕ್ಕಾಗಿ ಅವರನ್ನು ಮನವಾರೆ ಅಭಿನಂದಿಸುತ್ತೇನೆ.

ಶ್ರೀ. ನಾ. ಶ್ರೀ. ರಾಜಪುರೋಹಿತರು ಮರೆಯಲಾಗದ ವ್ಯಕ್ತಿಗಳಾಗಿದ್ದಾರೆ. ಶ್ರೀ. ರಾಜಪುರೋಹಿತರೊಂದಿಗೆ ನನ್ನ ನಿಕಟ ಪರಿಚಯವಿರಲಿಲ್ಲ. ಆದರೂ ನನ್ನವರು ಅರಿತಿದ್ದರು. ನನ್ನ ಬಗೆಗೆ ಅವರಲ್ಲಿ ಆತ್ಮೀಯತೆ ಇದ್ದಿತು. ಅವರ ಬಗೆಗೆ ನನ್ನದೂ ತುಂಬ ಗೌರವಾದರಗಳಿದ್ದವು.

ಕನ್ನಡ ನಾಡಿನ ಇತಿಹಾಸ, ಸಂಸ್ಕೃತಿ, ಪ್ರಗತಿಗಳ ಬಗೆಗೆ ಕಟ್ಟಾಭಿಮಾನವನ್ನು ತಳೆದುದು ದಿ. ರಾಜಪುರೋಹಿತರ ಜೀವನದ ವೈಶಿಷ್ಟ್ಯವಾಗಿತ್ತು. ಕರ್ನಾಟ ಇತಿಹಾಸ ಸಂಶೋಧನೆ ಅವರ ನೈಷ್ಠಿಕ ವ್ರತವಾಗಿತ್ತಲ್ಲದೆ, ಸಾಮಾನ್ಯ ಹವ್ಯಾಸವಾಗಿರಲಿಲ್ಲ.

ದಿ. ರಾಜಪುರೋಹಿತರು ಸಂಸಾರ ಮಧ್ಯದಲ್ಲಿದ್ದರೂ ಸನ್ಯಾಸಿಗಳಂತಿದ್ದರು; ತಪಸ್ವಿಗಳಾಗಿದ್ದರು; ಶುದ್ಧ ಸಾತ್ವಿಕ ಜೀವನವನ್ನು ಸಾಗಿಸಿದರು. ಕರ್ನಾಟಕ, ಕನ್ನಡ ಕುಲ ಅವರ ಆರಾಧ್ಯ ದೈವತವಾಗಿದ್ದಿತು. ಪ್ರದರ್ಶನ, ಪ್ರಕಟನ, ಪ್ರತಿಷ್ಠೆ, ಪ್ರತಿಫಲಗಳ ಆಶೆಯಿಲ್ಲದೆ, ಕನ್ನಡ ನಾಡಿನ ಶ್ರೇಯೋಭಿವೃದ್ಧಿಗಾಗಿ ಅವರು ತಮ್ಮ ತನು, ಮನ, ಧನಗಳನ್ನು ಶ್ರೀಗಂಧದಂತೆ ಸವಿಸಿದರು. ಅವರ ಶಿಕ್ಷಣವಾಗಲಿ, ಆರ್ಥಿಕ ಪರಿಸ್ಥಿತಿಯಾಗಲೀ ಉಚ್ಚಪ್ರತಿಯದಾಗಿರಲಿಲ್ಲ. ಆದರೂ ಅವರು ನಿರಾಡಂಬರ–ನಿರಪೇಕ್ಷ ಬುದ್ಧಿಯಿಂದ ಕರ್ನಾಟಕಕ್ಕೆ ಸಲ್ಲಿಸಿದ ಸೇವೆ ಅಪೌರ್ವ್ಯವಾದುದಾಗಿದೆ; ಅಪ್ರತಿಮವಾದುದಾಗಿದೆ, ಚಿರಸ್ಮರಣೀಯವಾದುದಾಗಿದೆ.

ಶ್ರೀ. ನಾ. ಶ್ರೀ. ರಾಜಪುರೋಹಿತರ ನಿಧನದಿಂದ ಕನ್ನಡ ನಾಡಿಗೊಂದು ಅಪಾರ ಹಾನಿಯಾಗಿದೆ. ಅವರಂತಹ ನಿಷ್ಠಾವಂತ ವಿದ್ವಾಂಸರ ಅಗತ್ಯ ಕನ್ನಡ ನಾಡಿಗೆ ಅಂದಿಗಿಂತ ಇಂದು ಹೆಚ್ಚಾಗಿದೆ. ದಿ. ರಾಜಪುರೋಹಿತರು ತೋರಿಸಿಕೊಟ್ಟ ಹಾದಿಯನ್ನು ತುಳಿಯಬಲ್ಲ ಧೀರ ಕನ್ನಡಿಗರು ಹುಟ್ಟಿಬರಲೆಂದು ಹಾರೈಸುವೆ.

ಧಾರವಾಡ<br>
೧೦-೧-೧೯೬೪

ಗ. ಶಿ. ಹುರಳಿ

೦೦೦೦

## ತಪಸ್ವಿ ರಾಜಪುರೋಹಿತರು

ತನ್ನ ಶಕ್ತಿ-ಸಲಕರಣೆಗಳಿಗೆ ಅನುಗುಣವಾದ ಒಂದು ಕಾರ್ಯ ಕ್ಷೇತ್ರವನ್ನು ಆರಿಸಿಕೊಂಡು, ಪ್ರಸನ್ನ ಮನೋಭಾವದಿಂದ ತ್ರಿಕರಣಪೂರ್ವಕವಾಗಿ ಯಾವನು ದುಡಿಯುತ್ತಾನೋ ಆತನೊಬ್ಬ ತಪಸ್ವಿ. ಈ ತಪಸ್ಸು ಐದು-ಹತ್ತು ವರುಷಗಳ ಅಲ್ಪಾವಧಿಯ ಯೋಜನೆಯಾಗಿರಬಹುದು, ಅಥವಾ ಅನೇಕ ವರ್ಷಗಳ ಜೀವಾವಧಿ ಯೋಜನೆಯಾಗಿರಬಹುದು. ತಪಸ್ಸಿನ ಫಲವನ್ನು ತಾನೇ ಅನುಭವಿಸುವ ಸ್ಥಿತಿಯೂ ಬರಬಹುದು, ಅಥವಾ, ತಪಸ್ಸಿನ ಕೊನೆಯ ಘಟ್ಟದಲ್ಲಿ ತಾನು ಕಣ್ಮರೆಯಾಗಿ, ಅದರ ಫಲವನ್ನು ಅನ್ಯರು ಅನುಭವಿಸುವಂತಾಗಬಹುದು. ರಾಷ್ಟ್ರಕ್ಕಿಂದು ಪೂರ್ಣ ಸ್ವರಾಜ್ಯ ಬಂದಿದ್ದು, ಅಪರಿಮಿತವಾದ ವೈಯಕ್ತಿಕ ಕೀರ್ತಿ, ಧನ, ಸುಖ, ಪ್ರಭಾವಗಳನ್ನು ಅನೇಕರು ಅನುಭವಿಸುತ್ತಿದ್ದಾರೆ, ಸಾವಿರಗಟ್ಟಲೆ ಕೋಟಿ ರೂಪಾಯಿಗಳನ್ನು ಮನಬಂದಂತೆ ವೆಚ್ಚ ಮಾಡುವ ಸುಯೋಗವೂ ಅವರಿಗೆ ದೊರೆತಿದೆ. ಆದರೆ ಅದರಲ್ಲಿ ಹಲವರು ಅನುಭವಿಸುತ್ತಿರುವುದು ತಮಗಿಂತ ಹಿರಿಯರಾಗಿದ್ದ ಹಿಂದಣವರ ತಪಸ್ಸಿನ ಫಲವನ್ನು. ಶ್ರೀ. ರಾಜಪುರೋಹಿತರು ೧೯೧೮ ರಿಂದ ಸಾಯುವತನಕವೂ ಇತಿಹಾಸ ಸಂಶೋಧನ ಕ್ಷೇತ್ರದಲ್ಲಿ, ಯಾವಜ್ಜೀವವೂ ತಪಸ್ಸು ಮಾಡುತ್ತಲಿದ್ದವರು. ನಖಶಿಖಾಂತ ಖಾದಿ ಧಾರಿಗಳಾಗಿ, ರಾಷ್ಟ್ರೀಯ ಶಿಕ್ಷಣ ಕ್ಷೇತ್ರದಲ್ಲಿಯೂ ಅವರು ದುಡಿದರು.

ಕನ್ನಡನಾಡಿನ ಸರಿಯಾದ ಇತಿಹಾಸವೆಂದರೆ ಅವರು ಬರೆದ ಪುಸ್ತಕವೇ ಎಂಬಷ್ಟರಮಟ್ಟಿಗೆ ಅವರ ಇತಿಹಾಸ ಪುಸ್ತಕವು ಲೋಕಪ್ರಿಯವೂ, ವಿದ್ವಜ್ಜನ ಸ್ತುತ್ಯವೂ ಆಗಿದ್ದಿತು. ಶ್ರೀ ಮನ್ಮಧ್ವಾಚಾರ್ಯರ ಕುರಿತು ಅವರು ಬರೆದಿರುವ ಜೀವನಚರಿತ್ರೆಯು ಒಂದು ಮಾದರಿಯ ಜೀವನ ಚರಿತ್ರೆಯಾಗಿದೆ. ಕನ್ನಡ, ಮರಾಠಿ, ಹಿಂದೀ — ಈ ಮೂರೂ ಭಾಷೆಗಳಲ್ಲವರು ಪಾಂಡಿತ್ಯ ಪಡೆದಿದ್ದರು. ಮರಾಠಿಯಲ್ಲವರು ಇತಿಹಾಸ ಸಂಶೋಧನಕ್ಕೆ ಸಂಬಂಧಿಸಿದ ನೂರಾರು ಲೇಖನಗಳನ್ನು ಪ್ರಕಟಿಸಿ, ಮಹಾರಾಷ್ಟ್ರದ ವಿದ್ವನ್ಮಂಡಲಿಯ ನಿಷ್ಕಪಟ ಪ್ರೇಮಾದರ ಗಳಿಸಿದ್ದರು. ಕರ್ನಾಟಕದ ಎಲ್ಲೆಡೆಯ ಇತಿಹಾಸವಿದ್ದರೂ ಅವರ ಲೇಖನಗಳನ್ನು ಆಧಾರ ಲೇಖನಗಳಾಗಿ ಸ್ವೀಕರಿಸುತ್ತಿದ್ದರು. ಅವರ ಲೇಖನಗಳನ್ನೆಲ್ಲ ಸಂಕಲ್ಪಿಸಿ, ಗ್ರಂಥ ರೂಪದಲ್ಲಿ ಹೊರತರುವುದು ಅಗತ್ಯವಾಗಿದೆ. ಅದರಿಂದ ಅವರ ಹೆಸರಿಗೊಂದು ಸ್ಮಾರಕ ರಚಿಸಿದಂತಾಗುವುದು.

ಅವರ ಲೇಖನ ಶೈಲಿ ಗಂಡು ಶೈಲಿ. ತರ್ಕದ ತೈಕ್ಷ್ಣ್ಯಕ್ಕೆ ಅದೊಂದು ಮಾದರಿ. ಅದರೂ ಅವರ ವೈಯಕ್ತಿಕ ಸ್ನೇಹವೊಂದು ಸಹ ಜತೆಗೇ ಹೆದ್ದಾರಿ "The evil that men do lives after them, the good is oft interred with their dones" ಎಂದಂತೆ, ಅವರ ಒಳ್ಳೆಯ ತನ, ಸಾತ್ವಿಕ ವೈದಿಕ ನಡವಳಿಗೆಗಳು ಸರ್ವ ಸಜ್ಜನರಿಂದಲೂ ಪ್ರೇಮಾದರದಿಂದ ಸ್ಮರಿಸಲ್ಪಡುತ್ತಿರುವುದನ್ನು ಕಂಡರೆ ಅವರು ಯಾವ ದುಷ್ಕೃತಿಯನ್ನೂ ಮಾಡಿದವರಲ್ಲವೆಂಬುದು ಖಚಿತವಾಗುವುದು. ೧೯೩೭ ರಿಂದಲೂ ಅವರ ನಿಕಟ ಸ್ನೇಹ-ವಾತ್ಸಲ್ಯಗಳ ಸುಯೋಗ ಪಡೆದ ನನಗೆ ಅವರ ನೆನಪಾದಾಗಲೆಲ್ಲ ಕಂಬನಿದುಂಬುವುದು. ಲಕ್ಷ್ಮಿಯು, ಈ ಲೋಕ ಜೀವನದಲ್ಲಿ, ಒಂದು ಅದ್ಭುತ ಘಟನಾ ಮೋಹಿನಿ (witch). ಕೆಲವರು ತಮ್ಮ ಬುದ್ಧಿ ಬಲದಿಂದ ಆಕೆಯನ್ನು ಕಟ್ಟಿಹಾಕಿ, ಆಕೆಯಿಂದ ಬೇಕಾದ ಕೆಲಸ ಮಾಡಿಸಬಲ್ಲರು; ಹಾಗೆಯೇ ಮತ್ತೆ ಕೆಲವರು ತಮ್ಮ ದೇಹ ಶ್ರಮದಿಂದ ಆಕೆಯನ್ನು ಕಟ್ಟಿಹಾಕಿ, ಒಡೆತನ ಮಾಡುವರು. ಶ್ರೀ ರಾಜಪುರೋಹಿತರು ಆದರ್ಶ ವೈದಿಕ ಸದ್ಗೃಹಸ್ಥರಾಗಿ ಬಾಳುತ್ತ, ಈ ಮಾಯಾ ಮೋಹಿನಿಯನ್ನು ಸಮೀಪ ಬರಗೊಡಲಿಲ್ಲ. ಬಡತನದ ಬದುಕಾಗಿದ್ದರೂ, ಅವರ ಹೃದಯದಲ್ಲಿ ಬಡತನವಿದ್ದಿಲ್ಲ. ಅವರನ್ನು ಸ್ಮರಿಸಿದಾಗ ಹೃದಯಕ್ಕೊಂದು ಶುದ್ಧಿ ಬರುವುದು. ಅದೇ ವ್ಯಕ್ತಿ ಜೀವನದ ಹಿರಿಮೆ.

ಜಿ. ಆರ್. ಪಾಂಡೇಶ್ವರ

oooo

## ತಂದೆಗೆ!

ಹಗಲಿರುಳು ಲೆಕ್ಕಿಸದೆ ದಾರಿ ಸಿಕ್ಕುವ ತನಕ
ಬೆಳಕು ಹರಿಯುವ ತನಕ-
ಕರ್ನಾಟಕದ ಮೂಲೆಯೊಂದನ್ನು ಬಿಡದೆ ನೀ
ಇತಿಹಾಸವನು ಬರೆದೆ ಸಂಚರಿಸುತ

ಕಲ್ಲ ಕರುಣವ ಕೇಳಿ ದೀನದೈನ್ಯತೆ ನೋಡಿ
ಗತ ವೈಭವನು ಹಾಡಿ ನೀ ಹರಿಸಿದೆ
ಕಲ್ಲಿಗಿಂತಲು ಜನರ ಬಿರುಸು ಹೃದಯವು ಎಂದು
ಕಲ್ಲಿನೊಳು ಗೆಳೆತನವ ನೀ ಬೆಳೆಸಿದೆ.

ಕೊಂಪೆಯಾದಾ ಹಂಪೆಯನು ವರ್ಣಿಸಿದರೇನು ?
ತಿರಿದು ತಿನ್ನುವದು ತಪ್ಪಿತೇನು ?
ಕಾಸು ಇಲ್ಲದೆ ಕಾಲ ನಡಗೆಯಲಿ ತಿರುತಿರುಗಿ
ತಂಗಡಗಿ ಕಾಳಗವ ಶೋಧಿಸಿದರೇನು ?

ಕೋಲನ್ನು ಊರೂತ್ತ ಕೈಯ್ಯನ್ನು ನಡಗಿಸುತ
ಎಲ್ಲಿ ಪೋದೆಯು ತಂದೆ ಬೇಗ ಹೇಳು ?
ಹೊದ್ದ ಶಾಲಿದು ನಿನ್ನ ಕತೆಯು ಹೇಳುವುದೆಲ್ಲ
ನಿಲ್ಲೆಂದು ಸೆರಗೊಡ್ಡಿ ಬೇಡಿಕೊಳುವೆ.

ಮಕ್ಕಳೆಲ್ಲರು ನಾವು ಸಲುಹಲಾರದೆ ಕೊಂಡು
ಜಗ ಬೇಡಿದರೇನು ಸಿಗುವ ವಸ್ತು ?
ಅರಸುತಿಹ ವಸ್ತುವದು ಕಣ್ಣೆದುರಿಗಿದ್ದರೂ
ಕಾಣಲಾರದೆ ಹೋಯ್ತು ನಾಡಜನಕೆ

—ಸೌ. ಸುಂದರಾ ಕುಲಕರ್ಣಿ

೦೦೦೦

## ದೊಡ್ಡಣ್ಣ ಮತ್ತು ನಾನು

ನಾವೆಲ್ಲ ತಂದೆಯವರನ್ನು 'ದೊಡ್ಡಣ್ಣ' ನೆಂದೇ ಕರೆಯುತ್ತಿದ್ದೆವು. ನಾನಂತೂ ಸಣ್ಣವನಿದ್ದಾಗ ಅವರನ್ನು 'ಒಡ್ಡಣ್ಣ' ನೆಂದು ಕರೆಯುತ್ತಿದ್ದೆನಂತೆ. ಅದನ್ನು ಅವರೇ ಹೇಳಿ ನಗುತ್ತಿದ್ದರು.

ನಾನು ಅವರಿಗೆ ಕೊನೆಯ ಮಗ. ನಾವೆಲ್ಲ ಚಿಕ್ಕವರಿದ್ದಾಗ ಅವರಿಂದ ಕತೆಗಳನ್ನು ಕೇಳುವದೆಂದರೆ ನಮಗೆ ಹಬ್ಬದೂಟವಿದ್ದಂತೆ. ಬಹುಶಃ ಅವರು ಊರಲ್ಲಿ ಇರುತ್ತಿದ್ದುದು ವರ್ಷದಲ್ಲಿ ೫-೬ ತಿಂಗಳು ಮಾತ್ರ. ಉಳಿದ ದಿನಗಳಲ್ಲಿ ಅವರು ಸಂಶೋಧನಾರ್ಥವಾಗಿ ಹೋಗಿರುತ್ತಿದ್ದರು. ಕಾರಣ ಅವರು ಊರಲ್ಲಿ ಇದ್ದಾಗ ನಾನಂತೂ ಕತೆ ಕೇಳುವ ಸಂದರ್ಭ ತಪ್ಪಿಸಿಕೊಳ್ಳುತ್ತಿರಲಿಲ್ಲ. ತಪ್ಪಿಸಿಕೊಂಡಂತೆಯೂ ನನಗೆ ನೆನಪಿಲ್ಲ. ಅವರು ಕತೆ ಹೇಳುತ್ತಿದ್ದುದು ರಾತ್ರಿ ಊಟವಾದ ಮೇಲೆ. ಕತೆ ಹೇಳುವ ಮೊದಲು ಅವರದೊಂದು ಕರಾರು. ಅದೆಂದರೆ ನಾನು ತಪ್ಪದೇ 'ಪ್ರಶೋತ್ತರಿ'ಯನ್ನು ಒಪ್ಪಿಸತಕ್ಕದ್ದು. ನಾನು 'ಪ್ರಶೋತ್ತರಿ' ಮುಗಿಸುವ ಹೊತ್ತಿಗೆ ನನ್ನ ತಾಯಿಯವರು ಹಾಗು ಅಕ್ಕಂದಿರು ತಮ್ಮ ಕೆಲಸ-ಬೊಗಸೆಗಳನ್ನು ತೀರಿಸಿಕೊಂಡು ಅವರೂ ತಪ್ಪದೆ ಕತೆಯ ಕಾರ್ಯಕ್ರಮಕ್ಕೆ ಹಾಜರಾಗುತಿದ್ದರು. ನಂತರ ನಾವೆಲ್ಲ ಮಲಗಿಯೇ ಕೇಳುತ್ತಿದ್ದೆವು. ಆಡಿಯಾಡುತ್ತ ಕತೆ ಹೇಳುವದು ಅವರ ಪದ್ಧತಿ. ಅವರು ಹೇಳುತ್ತಿದ್ದ ಕತೆಗಳೆಲ್ಲ ನೀತಿಯ ಕತೆಗಳು. ತಾವು ಕತೆ ಹೇಳಿದ ಬಳಿಕ ಅದರಿಂದ ಕಲಿಯತಕ್ಕ ಪಾಠವನ್ನು ನಮ್ಮ ಬಾಯಿಯಿಂದಲೇ ಅನ್ನಿಸಿಬಿಡುತ್ತಿದ್ದರು. ಕೆಲವೊಂದು ದಿನ ಕತೆಗಳ ಬದಲು ತಾವು ನೋಡಿದ ಶಿಲಾ ಶಾಸನ, ಸುಂದರ ಪ್ರತಿಮೆ, ಊರುಗಳ, ಕೆಲವೊಂದು ಜನರ ವಿಶಿಷ್ಟ ಪದ್ಧತಿಗಳ, ಐತಿಹಾಸಿಕ ಪ್ರಸಂಗಗಳ ವರ್ಣನೆ ಮಾಡುವುದುಂಟು. ಅವರು ತಿಳಿಸಿ ಹೇಳುವ ಪದ್ಧತಿ, ರುಚಿಕಟ್ಟಾಗಿ ಮನಹಿಡಿಯುವಂತೆ ಹೇಳುವದನ್ನು ನಾನು ಜೀವನದಲ್ಲಿ ಎಂದೂ ಮರೆಯುವಂತಿಲ್ಲ. ಹೀಗೆ ಅವರು ಹೇಳುತ್ತಿದ್ದಾಗ ನಾವು ಮಲಗಿಬಿಡುತ್ತಿದ್ದೆವು. ನಂತರ ಅವರು ತಮ್ಮ ಅಭ್ಯಾಸ ಪ್ರಾರಂಭಿಸುತ್ತಿದ್ದರು. ಅವರು ಮಲಗುತ್ತಿದ್ದುದು ಅತಿ ಕಡಿಮೆ. ೩-೪ ತಾಸು ಮಾತ್ರ, ಮತ್ತೆ ಬೇಗನೆ ಎದ್ದು ತಮ್ಮ ಅಭ್ಯಾಸ ಮಾಡುತ್ತಿದ್ದರು. ಬಳಿಕ ನಸುಕಿನಲ್ಲಿ ನಮ್ಮೆಲ್ಲರನ್ನು ಎಬ್ಬಿಸಿ ತಾವು ತಮ್ಮ ನಸುಕಿನ ವಿಹಾರಕ್ಕೆ ಹೋಗುತ್ತಿದ್ದರು.

ಸಂಶೋಧನೆಯ ಕೆಲಸಕ್ಕೆ ಅವರು ಹೋಗುತ್ತಿದ್ದಾಗ ನಾನೂ ಒಂದೆರಡು ಸಲ ಅವರ ಜೊತೆ ಇದ್ದುದುಂಟು. ನಾನಾಗ ಸಣ್ಣವ. ಅವರು ಶಿಲಾಲಿಪಿಯ ಪ್ರೂಫ್‌ಗಳನ್ನು ತೆಗೆಯುವದು, ಮೂರ್ತಿಗಳನ್ನು ನಿರೀಕ್ಷಿಸುವದು, ಶಿಲಾಶಾಸನ ಓದುವದು ನೋಡಿದರೆ ಒಂದೂ ನನಗೆ ಅರ್ಥವಾಗುತ್ತಿರಲಿಲ್ಲ. ‘ಅದು ಏನು? ಇದು ಏನು ? ನನಗೂ ಶಿಲಾಶಾಸನ ಓದಲು ಕಲಿಸು’ ಎಂದು ಕೇಳಿ ಕೇಳಿ ಅವರ ತಲೆ ಹಿಡಿಸುತ್ತಿದ್ದೆ. “ಸ್ವಲ್ಪ ದೊಡ್ಡವನಾಗು ಎಲ್ಲವನ್ನೂ ಕಲಿಸುವೆ” ಎನ್ನುತ್ತಿದ್ದರು. ಕೆಲವೊಂದು ಸಲ ಅವರು ಒಂದೊಂದು ಶಬ್ದಕ್ಕಾಗಿ ೪-೫ ದಿನ ಅಭ್ಯಾಸ ಮಾಡುವದು, ೪-೫ ಜನರೊಡನೆ ಅದಕ್ಕಾಗಿ ಚರ್ಚಿಸುವದು ನೋಡಿದರೆ ನನಗೆ ಆಶ್ಚರ್ಯವಾಗುತ್ತಿತ್ತು. ಅವರು ಯಾವದೊಂದು ವಿಷಯ ವನ್ನು ವಿಚಾರಿಸುತ್ತಿದ್ದಾಗ ಇಲ್ಲವೆ ಅಭ್ಯಸಿಸುತ್ತಿದ್ದಾಗ ಉಳಿದ ಕಡೆಗೆ ಅವರಿಗೆ ಲಕ್ಷ್ಯ ಕಡಿಮೆ. ಅದು ಪೂರ್ಣವಾಗುವವರೆಗೆ ಅದೇ ಗುಂಗಿನಲ್ಲಿಯೇ ಇರುತ್ತಿದ್ದರು. ನಾವು ಏನಾದರೂ ಕೇಳಿದರೆ ‘ಹೂಂ ಹೂಂ’ ಎಂದೇ ಉತ್ತರ. ಗಟ್ಟಿಸಿ ಕೇಳಿದಾಗಲೇ ಅವರಿಗೆ ಗೊತ್ತು. ಹೀಗೆ ಒಂದು ಸಲ ನಾನು ಗಣಿತ ಹೇಳಿಸಿಕೊಳ್ಳುತ್ತಿದ್ದಾಗ ಒಂದು ಗಡಚಾದ ಲೆಖ್ಖ ಬಂದಿತು. ಅವರಿಗೂ ಆ ವೇಳೆಗೆ ಬರಲಿಲ್ಲ. ಸರಿ, ಅದು ಅವರ ತಲೆ ಹೊಕ್ಕಿತು. ಅಂದೇ ಸಂಜೆ ಅವರೆಲ್ಲೋ ಸಭೆಗೆ ಹೊರಟಿದ್ದರು. ಅರ್ಧ ಹಾದಿಯಲ್ಲೇ ಅದು ಅವರಿಗೆ ಬಂದಿತು. ಹಾಗೆಯೇ ನನಗೆ ತಿಳಿಸಲು ಮನೆಗೆ ತಿರುಗಿ ಬಂದಿದ್ದರು.

ಅವರಿಗೆ ಅಲಕ್ಷ್ಯತನ ಕಂಡರೆ ಎಳ್ಳಷ್ಟೂ ಆಗುತ್ತಿರಲಿಲ್ಲ. ಆ ಆ ವಸ್ತುಗಳು ಆ ಆ ಸ್ಥಳಗಳಲ್ಲಿ ಇಲ್ಲದಿದ್ದರೆ ಅವರಿಗೆ ಸಿಟ್ಟು. ಇದಕ್ಕೆ ವಿರುದ್ಧವಾಗಿ ನನ್ನ ಸ್ವಭಾವ. ಯಾವ ಸಾಮಾನುಗಳನ್ನು ಎಲ್ಲಿಗೆ ತೆಗೆದುಕೊಂಡು ಹೋಗಿರುತ್ತಿದ್ದೇನೊ ಅಲ್ಲಿಯೇ ಮರೆತು ಇಡುವದು. ಅವರದು ಪುಸ್ತಕಗಳ ಮೇಲೆ ಪ್ರೀತಿ ಹೆಚ್ಚು. ಅವರ ಪುಸ್ತಕಗಳು ಇದ್ದ ಸ್ಥಳದಲ್ಲಿ ಇರದಿದ್ದರೆ ಅವರಿಗೆ ಅತಿ ಸಿಟ್ಟು. “ಕತ್ತಲಲ್ಲಿ ಸೂಜಿ ಬೇಕಾದರೂ ದೀಪ ಹಚ್ಚದೇ ಹುಡುಕದೇ ತರುವಂತಿರಬೇಕು” ಎನ್ನುತ್ತಿದ್ದರು. ಇದಕ್ಕೆ ಮಹಾರಾಷ್ಟ್ರದ ಕೊಂಕಣಸ್ಥರನ್ನು ಉದಾಹರಿಸುತ್ತಿದ್ದರು. ನಾವು ತಡಮಾಡಿ ಏಳುವದು ಅವರಿಗೆ ಸರಿ ಬರುತ್ತಿರಲಿಲ್ಲ. ಅಚ್ಚುಕಟ್ಟಾದ ಶಿಸ್ತಿನ ಜೀವನವೆಂದರೆ ಅವರಿಗೆ ಮೆಚ್ಚು. ಶಿಸ್ತಿನ ಜೀವನಕ್ಕೆ ಯುರೋಪಿಯನ್‌ರನ್ನು ಉದಾಹರಿಸುತ್ತಿದ್ದರು.

ಸಂಸಾರದಲ್ಲಿದ್ದರೂ ಅವರಿಗೆ ಸಂಸಾರದ ಮೋಹವಿರಲಿಲ್ಲ. ಅವರು ಸಂಚಾರಾರ್ಥವಾಗಿ ಹೋಗುವಾಗ "೮-೧೦ ದಿವಸಗಳಲ್ಲಿ ತಿರುಗಿ ಬಂದುಬಿಡುವೆ. ವಾರಕ್ಕೊಂದು ತಪ್ಪದೇ ಪತ್ರ ಬರೆಯುವೆ" ಎಂದು ಹೇಳುತ್ತಿದ್ದರು. ಮುಂದೆ ೫-೬ ತಿಂಗಳಾದರೂ ಅವರ ಪತ್ರವೂ ಬರುತ್ತಿರಲಿಲ್ಲ; ಅವರೂ ಬರುತ್ತಿರಲಿಲ್ಲ. ಬಹುಶಃ ಅವರು ಮನೆ ಬಿಟ್ಟು ಹೋದರೆಂದರೆ ಮನೆಯನ್ನೇ ಮರೆತರೇನೊ ಎಂದು ಅನಿಸುತ್ತಿತ್ತು. ಎಂದಾದರೂ ತಪ್ಪಿ ಪತ್ರ ಬಂದರೆ, ಅದರಲ್ಲಿ "ತಮಗೆ ಯಾವ ಯಾವ ಪುಸ್ತಕ ಬಂದಿವೆ ? ತಮ್ಮ ಪ್ರಸಿದ್ಧವಾಗಬೇಕಾದ ಲೇಖನ ಪ್ರಸಿದ್ಧವಾಗಿದೆಯೇ ? ಯಾವದಾದರೂ ಪತ್ರಗಳು ತಮ್ಮ ಹೆಸರಿನಲ್ಲಿ ಬಂದಿದ್ದರೆ ವ್ಯವಸ್ಥಿತವಾಗಿ ಇಡಬೇಕೆಂತಲೂ ಬರೆಯುತ್ತಿದ್ದರು. ಬಹಳ ದಿನಗಳಿಂದ ಊರಿಗೆ ಬಂದರೆಂದರೆ, ಬಂದಕೂಡಲೇ ತಮಗೆ ಬಂದ ಪತ್ರಗಳನ್ನು ನೋಡುವದು, ತಮ್ಮ ಪುಸ್ತಕಗಳು ವ್ಯವಸ್ಥಿತವಾಗಿ ಇವೆಯೊ ಹೇಗೆ ? ನೋಡುವದು. ನಂತರ ಮನೆಯ ವಿಚಾರ.

ನಮ್ಮ ಮನೆಯಲ್ಲೊಂದು ಕಾಯಂ ಕ್ಯಾಲೆಂಡರ ಇದೆ. ಅಂದರೆ ದಿನಾಲು ಅದರ ತಾರೀಖಿನ ರಟ್ಟಿನ-ತುಂಡುಗಳನ್ನು ಬದಲಿಸಬೇಕಾಗುವದು. ದಿನಾಲು ಮಲಗುವ ಮುಂಚೆ ಅವರು ತಪ್ಪದೇ ಬದಲಿಸುತ್ತಿದ್ದರು. ಊರಿಗೆ ಹೋಗುವಾಗ ನಮಗೆ ಬದಲಿಸಲು ಹೇಳುತ್ತಿದ್ದರು. ನಾವೆಲ್ಲ ಮರೆತು ಬಿಡುತ್ತಿದ್ದೆವು. ಊರಿಗೆ ಬಂದ ನಂತರ ಅದು ಹಾಗೆ ಇದ್ದುದನ್ನು ನೋಡಿ ನನ್ನನ್ನು ಕೇಳುತ್ತಿದ್ದರು. ಆಗ ನಾನು "ಬೇಕಂತಲೇ ಅದನ್ನು ಬಿಟ್ಟಿತ್ತು. ಯಾಕೆಂದರೆ ನೀವು ಎಂದು ಊರಿಗೆ ಹೋದಿರೆಂಬುದು ಅದರಿಂದ ತಿಳಿಯುತ್ತದೆ" ಎಂದು ಹೇಳುತ್ತಿದ್ದೆ.

ಅವರು ಎಂದೂ ತಮ್ಮ ಕೆಲಸದಲ್ಲಿ ಗಡಬಿಡಿ ಮಾಡಿಕೊಳ್ಳುತ್ತಿರಲಿಲ್ಲ. ಘಾಬರಿಯಾಗುತ್ತಿರಲಿಲ್ಲ. ಊರಿಗೆ ಹೋಗುವದಿರಲಿ, ಸಭೆಗೆ ಹೋಗುವದಿರಲಿ; ಎಲ್ಲಿಗೇ ಹೋಗುವದಿರಲಿ ಮನೆಯನ್ನೇ ಸ್ವಲ್ಪ ಬೇಗ ಬಿಡುತ್ತಿದ್ದರು. ಹೊರತು ಅವಸರ ಮಾಡಿಕೊಳ್ಳುತ್ತಿರಲಿಲ್ಲ. ಎಲ್ಲವೂ ಅವರಿಗೆ ನಿಧಾನವಾಗಿ ಆಗಬೇಕು. ಒಂದು ಕೆಲಸ ಪೂರ್ಣವಾಗುವವರೆಗೂ ಮತ್ತೊಂದರ ವಿಚಾರ ಮಾಡುತ್ತಿರಲಿಲ್ಲ. ದಿನಾಲು ಬೆಳಿಗ್ಗೆ ಅಂದಿನ ತಮ್ಮ ಕೆಲಸಗಳನ್ನು ಬರೆಯುತ್ತಿದ್ದರು. ನಂತರ ಅದರಂತೆ ಕೆಲಸ, ದಿನಾಲೂ ಮಲಗುವ ಮುಂಚೆ ಅಂದಿನ 'ಡೈರಿ' ಬರೆಯುತ್ತಿದ್ದರು.

ಅವರು ನಡೆಯುವಾಗ ನಿಧಾನವಾಗಿ ನಡೆಯುವದು ಪದ್ಧತಿ. ವಿಚಾರ ಮಾಡುತ್ತ ರಸ್ತೆಯ ಒಂದು ಬದಿಯಿಂದ ಹೊರಡುತ್ತಿದ್ದರು. ಒಂದು ಕೈಯಲ್ಲಿ ಕೊಡೆ-ಇಲ್ಲವೆ ಕೋಲು, ಇನ್ನೊಂದು ಕೈಯಲ್ಲಿ ನಸ್ಯದ ಡಬ್ಬಿ. ತಲೆ ಕೆಳಗೆ ಮಾಡಿಕೊಂಡು ಸಾವಕಾಶವಾಗಿ ಹೊರಬಿದ್ದರೆಂದರೆ ಇದುರಿಗೆ ಗುರುತಿನವರು ಬಂದರೂ ತಿಳಿಯುತ್ತಿರಲಿಲ್ಲ. ಕೆಲವೊಂದು ಸಲ ತಾವು ಹೋಗುವ ಸ್ಥಳಕ್ಕಿಂತಲೂ ಮುಂದೆ ಹೋದುದುಂಟು. ಅವರು ಎಷ್ಟೇ ಸುತ್ತಾಡಲಿ, ಕಡು ಬಿಸಿಲಿರಲಿ, ಛಳಿ ಇರಲಿ, ಮಳೆ ಇರಲಿ ಅವರಿಗೆ ಆಯಾಸವಾಗುತ್ತಿರಲಿಲ್ಲ. ನಮ್ಮ ಅಕ್ಕನ ಊರಿಗೆ ಹೋಗಬೇಕಾದರೆ ಹಾವೇರಿಯಿಂದ ಬಸ್ಸಿನಲ್ಲಿ ೭ ಮೈಲು ಹೋಗಬೇಕಾಗುವದು. ಇವರು ಕೆಲವೊಂದು ಸಲ ಹಾಗೆಯೇ ನಡೆಯುತ್ತ ಹೋಗುತ್ತಿದ್ದುಂಟು. ಊರಲ್ಲಿ ನಮ್ಮ ಅಕ್ಕ "ಏನು ಮೋಟರಿನಲ್ಲಿ ಬಂಡೆಯಾ ? ಈಗೆಲ್ಲಿ ಮೋಟರ ಇದೆ ?" ಎಂದು ಕೇಳಿದರೆ "ಇಲ್ಲ ತಂಗಿ ಹಾಗೇ ನಡೆಯುತ್ತ ಬಂದು ಬಿಟ್ಟೆ. ನೋಡು ನಡೆಯುತ್ತ ಬಂದರೆ ಮೋಟಾರಿನ ದಾರಿ ಕಾಯುವದು ತಪ್ಪುವದು ಮೇಲಾಗಿ ನನ್ನ ಒಂದೊಂದು ವಿಚಾರವಾದರೂ ಹಾದಿಯಲ್ಲಿ ಪೂರ್ಣವಾಗುತ್ತದೆ" ಎಂದು ಅನ್ನುತ್ತಿದ್ದರು.

ನಮ್ಮ ಮನೆಯಲ್ಲೊಂದು ಆರಾಮು ಕುರ್ಚಿ (Easy-chair) ಇದೆ. ಅದೊಂದು ಅವರ ಪ್ರೀತಿಯ ವಸ್ತುಗಳಲ್ಲೊಂದು. ಅವರು ಬಿಸಿಲಲ್ಲಿ ಬಹಳಷ್ಟು ಸುತ್ತಾಡಿ ಬಂದರೆಂದರೆ, ತಮ್ಮ ಕೋಟು-ಟೊಪ್ಪಿಗೆ ತೆಗದಿಟ್ಟು ಅದರ ಮೇಲೆ ಕುಳಿತು ಒಂದು ಚುಟಿಕೆ ನಸ್ಯವೇರಿಸಿದರೆ ತಮ್ಮ ಆಯಾಸ ಪರಿಹಾರವಾಗುವದೆಂದು ಹೇಳುತ್ತಿದ್ದರು. ಮನೆಯಲ್ಲಿ ತಗಣೆಗಳಾದಾಗ ಅದರಲ್ಲಿ ಅವರು ಮಲಗುತ್ತಿದ್ದರು. ಅವರು ಓದುವದೆಲ್ಲ ಅದರ ಮೇಲೆಯೇ. ಅದರ ಅರಿವೆಯನ್ನು ಒಗೆಯಲಿಕ್ಕೆ ತೆಗೆದುಕೊಂಡಾಗ ಅವರ ಕೈ ಮುರಿದಂತೆಯೇ ಆಗುತ್ತಿತ್ತು ಅಂತೂ ಅದೊಂದು ಅವರ ಹಳೆಯ ಸ್ನೇಹಿತನಂತಿತ್ತು.

ಕೊನೆಯ ಎರಡು ವರ್ಷಗಳಲ್ಲಿ ಅವರ ಪ್ರಕೃತಿ ಬಹಳ ಅಸ್ವಸ್ಥವಾಗಿತ್ತು. ಅಂತಹದರಲ್ಲಿಯೂ ಕೂಡಾ ಅವರು ಸುಮ್ಮನೆ ಕುಳಿತಿರಲಿಲ್ಲ. ಅವರ ಸತತ ಅಭ್ಯಾಸ, ಲೇಖನ ಬರೆಯುವದು, ತಿರುಗಾಡುವದು ನಡೆದೇ ಇತ್ತು. ನಾವು ಎಷ್ಟೇ ಹೇಳಿದರೂ ಕೇಳುತ್ತಿರಲಿಲ್ಲ. ಅವರು ತುಂಬಾ ಆತ್ಮ ವಿಶ್ವಾಸಿಗಳು. ಅವರ ಪ್ರಕೃತಿಯ ಸ್ಥಿತಿ ಎಷ್ಟೇ ಕಠಿಣ ಪ್ರಸಂಗಕ್ಕೆ ಹೋಗಿದ್ದರೂ ನಮಗೆಯೇ ಧೈರ್ಯ ಹೇಳುತ್ತಿದ್ದರು. ಅವರಿಗೆ ವೇದನೆ ಎಷ್ಟೇ ಆಗುತ್ತಿದ್ದರೂ ತಮಗೇನೂ

ಆಗಿಲ್ಲವೆಂದೇ ಹೇಳಿ ನಮ್ಮನ್ನು ಸಮಾಧಾನ ಪಡಿಸುತ್ತಿದ್ದರು. ಅವರು ಔಷಧ ತೆಗೆದುಕೊಳ್ಳುವದಿರಲಿ, ಇಂಜೆಕ್ಶನ ತೆಗೆದುಕೊಳ್ಳುವದರಲ್ಲಿ ಶಾಂತರಾಗಿಯೇ ಇರುತ್ತಿದ್ದರು. ಅವರ ಈ ಕಷ್ಟ ಸಹಿಷ್ಣುತೆಯ ಗುಣ 'ಕಂಡು ' ಸರಕಾರಿ ದವಾಖಾನೆ ' (Civil hospital) ಯಲ್ಲಿ ಎಲ್ಲರೂ ಆಶ್ಚರ್ಯಪಡುತ್ತಿದ್ದರು. ಅವರು ಇನ್ನೂ ಬಹಳಷ್ಟು ಬರೆಯಬೇಕೆಂದು ಮಾಡಿದ್ದರು. ಐತಿಹಾಸಿಕ ವಾಗಿ ಶ್ರೀ ಕೃಷ್ಣನ ಚರಿತ್ರೆ, ಕಾಂಗ್ರೆಸ್ಸಿನ ಚರಿತ್ರೆ, ಕನ್ನಡದ ಎಲ್ಲ ಮಹಾಪುರು ಷರ ಚರಿತ್ರೆ, ಕೊನೆಯದಾಗಿ ಅವರಿಗೆ ತಮ್ಮ ಆತ್ಮ ಚರಿತ್ರೆ ಬರೆಯಬೇಕೆಂಬ ಇಚ್ಛೆ ಇತ್ತು. ಮನುಷ್ಯನ ಇಚ್ಛೆಗಳೆಲ್ಲ ಎಲ್ಲಿ ಕೈಗೂಡುವವು ?

ಅವರ ಕಷ್ಟ ಸಹಿಷ್ಣುತೆ, ಶಿಸ್ತು, ನಿಯಮಿತತೆ, ಸರಳತನ, ಆತ್ಮವಿಶ್ವಾಸ, ಗುರುಗಳಲ್ಲಿ ಶ್ರದ್ಧೆ, ಸತತ ಪ್ರಯತ್ನ, ಕಾರ್ಯ ತತ್ಪರತೆ, ಕೆಲಸದಲ್ಲಿ ದಕ್ಷತೆ, ಕೂಲಂಕಷವಾಗಿ ಎಲ್ಲವನ್ನೂ ವಿಚಾರಿಸುವದು, ಶಾಂತತೆ-ಸಮಾಧಾನ ವೃತ್ತಿ— ಈ ಎಲ್ಲ ಗುಣಗಳು ಸ್ವಲ್ಪಾದರೂ ನನ್ನಲ್ಲಿ ಬರಲೆಂದು ಅವರ ಆರಾಧ್ಯ ದೇವತೆ ಯಾದ ಜಗಜ್ಜನನಿಯನ್ನು ಬೇಡಿಕೊಳ್ಳುತ್ತೇನೆ. ಅವರಷ್ಟಾಗದಿದ್ದರೂ ಸ್ವಲ್ಪಾದರೂ ನಾನೂ ಸಾರ್ವಜನಿಕ ಸೇವೆ ಮಾಡಿದರೆ ಅವರ ಆತ್ಮಕ್ಕೆ ಸ್ವಲ್ಪಾ ದರೂ ಸಮಾಧಾನವಾದೀತು. ಅಂತಹ ಬುದ್ಧಿ-ಶಕ್ತಿಗಳಿಗಾಗಿ ಪರಮಾತ್ಮ ನನ್ನು ಪ್ರಾರ್ಥಿಸುವೆ.

ಪುಣೆ ಮಧ್ವ ನಾರಾಯಣ ರಾಜಪುರೋಹಿತ

ಹೃದಯ ಸ್ಪರ್ಶಿಯಾದ ಈ ಲೇಖವನ್ನು ಬರೆಯುವ ಕಾಲಕ್ಕೆ ಮಧ್ವನಿಗೆ ೧೭ ವರ್ಷ ವಯಸ್ಸಾಗಿದ್ದಿತು. ತೀಕ್ಷ್ಣ ಬುದ್ಧಿಯುವನೂ, ವಾಗ್ಮಿತೆಯುಳ್ಳವನೂ ಆದ ಅವನು ಹೆಚ್ಚಿನ ವಿದ್ಯಾರ್ಜನೆಯ ಅನುಕೂಲತೆಯಿಲ್ಲದೆ, ಮುಂಬಯಿ ಟೆಲಿಗ್ರಾಫ ಕಚೇರಿಯಲ್ಲಿ ಹೊಸದಾಗಿ ಕೆಲಸಕ್ಕಿದ್ದನು. ಅವನ ಅಕ್ಕನ ಮನೆ ಗೆಂದು ಊರಿಗೆ ಬಂದಿದ್ದು ಸಂಗೂರಿನ ವರದಾ ನದಿಯಲ್ಲಿ ಈಸುವುದಕ್ಕೆ ಹೋಗಿದ್ದಾಗ, ೧೭-೫-೫೫ ರಂದು, ಸಾವು ಅವನನ್ನು ಕೊಂಡೊಯ್ದಿತು. ಮಧ್ವನಿಗೆ ಈ ಮೂಲಕ ನನ್ನ ಶ್ರದ್ಧಾಂಜಲಿಯನ್ನು ಅರ್ಪಿಸುತ್ತೇನೆ.

ಶ್ರೀನಿವಾಸ ಹಾವನೂರ

## ಶ್ರೀ. ಸಾ. ಶ್ರೀ. ರಾಜಪುರೋಹಿತರು

ದಿವಂಗತ ಶ್ರೀ. ರಾಜಪುರೋಹಿತರ ಪರಿಚಯು ನನಗೆ ೧೯೧೫ ರಿಂದಲೂ ಇದೆ. ಅವರ ಪರಿಚಯುವಿದ್ದವರು ಯಾರೇ ಆಗಲಿ, ಅವರ ವ್ಯಕ್ತಿತ್ವ ಹಾಗೂ ಅನುಕರಣೀಯು ಗುಣಗಳಿಂದ ಆಕರ್ಷಿಸಲ್ಪಡದೆ ಇರುತ್ತಿರಲಿಲ್ಲ. ಅವರದು ನಿರಾಡಂಬರದ ಪವಿತ್ರ ಜೀವನ. ಬಡತನವು ಕೊನೆಯುವರೆಗೂ ಅವರನ್ನು ಪಣತೊಟ್ಟಂತೆ ಕಾಡಿತು. ಆದರೆ ಎಂಥ ಆಪತ್ಕಾಲದಲ್ಲಿಯುೂ ಅವರು ಧೈರ್ಯ ಗುಂದದೆ ತಮ್ಮ ಜೀವನದ ಧ್ಯೇಯುವಾದ ಇತಿಹಾಸ-ಸಂಶೋಧನೆಯುನ್ನು ಮುಂದುವರಿಸಿದರು. ವಿಪತ್ತುಗಳು ಅವರನ್ನು ಪರೀಕ್ಷಿಸಿ ಅವರ ಯೋಗ್ಯತೆಯುನ್ನು ಜನರಿಗೆಲ್ಲ ತೋರಿಸಿಕೊಟ್ಟವು. ಎಂಥ ಕೊರತೆಯುುಂಟಾದಾಗಲೂ ಅವರು 'ಜೀಹಿ' ಎಂದು ಕೈಯೊಡ್ಡಲಿಲ್ಲ. ಕರ್ನಾಟಕದ ಇತಿಹಾಸ–ಸಂಸ್ಕೃತಿಗಳ ಬಗೆಗೆ ಮೌಲಿಕವಾದ ಶೋಧಗಳನ್ನು ಅವರು ಮಾಡಿದ್ದರೂ ಅವರು ಕೀರ್ತಿಯುನ್ನು ಬಯುಸದೆ ಎಲೆಯು ಮರೆಯು ಹೂವಾಗಿದ್ದರು.

ಅವರ ಸಂಶೋಧನೆಯು ಪದ್ಧತಿಯು ಶಾಸ್ತ್ರೀಯುವಾಗಿತ್ತು. ಸಂಶೋಧನೆ ಮಾಡಿ ನಿರ್ಣಯಕ್ಕೆ ಬರುವಾಗ ಅವರು ಯಾವುದೇ ಪೂರ್ವಗ್ರಹಗಳನ್ನಿಟ್ಟುಕೊಳ್ಳದೆ ನಿಷ್ಪಕ್ಷಪಾತ ದೃಷ್ಟಿಯುನ್ನಿರಿಸಿಕೊಳ್ಳುತ್ತಿದ್ದರು. ಅವರು ನಮ್ಮ ದೇಶದ ಮೂಲೆ-ಮೂಲೆಗಳಲ್ಲಿಯು ಶಾಸನಗಳನ್ನೋದಿದರು. ಆಗಿನ ಕಾಲಕ್ಕಂತೂ ಶಿಲಾಲೇಖಗಳ ಅಭ್ಯಾಸಕ್ಕೆ ಯಾವ ಬೆಲೆಯುೂ ಇದ್ದಿರಲಿಲ್ಲ. ಆದರೆ ಶ್ರೀ. ರಾಜಪುರೋಹಿತರು ಯಾವ ಪ್ರತಿಫಲದ ಅಪೇಕ್ಷೆಯಿಲ್ಲದೆ, ತಮ್ಮ ಕೆಲಸವನ್ನು ತಪಸ್ಸಿನಂತೆ ಅವಿಚ್ಛಿನ್ನವಾಗಿ ಮುಂದುವರಿಸಿದರು. ಅವರು ತಮ್ಮ ಸಂಶೋಧನೆಯು ಫಲಗಳನ್ನು ಪ್ರಬಂಧಗಳ ರೂಪದಲ್ಲಿ ಪ್ರಕಟಿಸಿದ್ದಾರೆ. ಆದರೆ ಅವರಿಗೆ ಬರೆಯುುವುದಕ್ಕಿಂತ ಮಹತ್ವದ ಹಾಗೂ ನಿಗೂಢ ಸಮಸ್ಯೆಗಳ ಸಂಶೋಧನೆಯುಲ್ಲಿಯೇ ಆಸಕ್ತಿ ಹೆಚ್ಚು. ಇವರು ಕರ್ನಾಟಕದ ರಾಜಕೀಯು ಇತಿಹಾಸ-ಸಂಸ್ಕೃತಿಗಳ ಬಗೆಗೆ ಆಳವಾಗಿ ಅಭ್ಯಾಸ ಮಾಡಿದುದಲ್ಲದೆ 'ಶ್ರೀ ಸುರೇಶ್ವರಾಚಾರ್ಯರ ಚರಿತ್ರೆ', 'ದಾನ ಧರ್ಮ ಪದ್ಧತಿ', 'महाराष्ट्र व कर्नाटक' ಮೊದಲಾದ ಗ್ರಂಥಗಳನ್ನು ರಚಿಸಿದ್ದಾರೆ.

ಸಂಶೋಧನೆಯ ಈ ಅವರ ಆಸಕ್ತಿಯು ಧಾರವಾಡದಲ್ಲಿ ಮೂರ್ತ-ಸ್ವರೂಪವನ್ನು ಪಡೆಯಿತು. ಅದೇ 'ಕರ್ನಾಟಕ ಇತಿಹಾಸ ಸಂಶೋಧನಾ

ಮಂಡಳ'. ಶ್ರೀ. ರಾಜಪುರೋಹಿತರು ಕರ್ನಾಟಕದ ಕುಲಪುರೋಹಿತರೆಂದು ಪ್ರಖ್ಯಾತರಾದ ಶ್ರೀ. ಆಲೂರ ವೆಂಕಟರಾಯರ ಸಹಕಾರದೊಂದಿಗೆ ಧಾರವಾಡ ದಲ್ಲಿ ಮೇಲೆ ಹೇಳಿದ ಸಂಶೋಧನಾ ಸಂಸ್ಥೆಯನ್ನು ಸ್ಥಾಪಿಸಿದರು. ಆ ಕಾಲಕ್ಕೆ ಪರಿಸ್ಥಿತಿಯು ಯಾವ ರೀತಿಯಿಂದಲೂ ಅನುಕೂಲವಿರಲಿಲ್ಲ. ಒಂದು ಕಡೆಗೆ ಜನಸಾಮಾನ್ಯರಲ್ಲಿ ಇಂಥ ವಿಷಯಗಳ ಬಗ್ಗೆ ಉದಾಸೀನತೆ; ಇನ್ನೊಂದೆಡೆ ಪ್ರತಿಕೂಲ ಧೋರಣವುಳ್ಳ ಆಗಿನ ಸರಕಾರ. ಇಂಥ ದುರ್ಧರ ಪರಿಸ್ಥಿತಿ ಯಲ್ಲಿಯೂ ಎದೆಗೆಡದೆ ಶ್ರೀ. ರಾಜಪುರೋಹಿತರು ಕರ್ನಾಟಕದ ಇತಿಹಾಸ-ಸಂಶೋಧನೆಗೆಂದೇ ಮೀಸಲಾದ ಒಂದು ಸಂಸ್ಥೆಯನ್ನು ನಿರ್ಮಿಸಿ ಅದರ ಸರ್ವತೋಮುಖವಾದ ಏಳಿಗೆಗೆ ಹಗಲಿರುಳು ಯತ್ನಿಸಿದರು. ಅವರ ಬಡತನ ವಾಗಲಿ ಅಥವಾ ಅವರ ಮನೆತನದ ಇನ್ನಿತರ ತೊಂದರೆಗಳಾಗಲಿ ಅವರು ಕೈಕೊಂಡ ಕಾರ್ಯದಲ್ಲಿ ಅಡ್ಡಿಯಾಗಲಿಲ್ಲ. ಅವರ ಈ ನಿಷ್ಠೆಯನ್ನು ಗೌರವಿಸಿ ಅವರಿಗೆ ನಾವು ಚಿರಋಣಿಯಾಗಿರುವುದು ನಮ್ಮ ಕರ್ತವ್ಯ.

ಸಂಶೋಧನ ಸಂಸ್ಥೆಯ ಒಳ್ಳೆಯ ಉದ್ದೇಶವನ್ನು ಮನಗಂಡು ಈಗ ಕೇಂದ್ರ ಸರಕಾರದ ಆರೋಗ್ಯ ಮಂತ್ರಿಗಳಾಗಿರುವ ಮಾನ್ಯ ಶ್ರೀ. ದ. ಪ. ಕರಮರಕರ, ರಿಟಾಯರ್ಡ ಸಬ್ ಜಜ್ಜ ಶ್ರೀ. ಹಾಲಭಾವಿಯವರು, ಶ್ರೀ. ರುಕ್ಮಾಂಗದರಾವ ದೇಶಪಾಂಡೆ ಮೊದಲಾದ ಮಹನೀಯರು ಸಮಯೋಚಿತ ವಾದ ಸಲಹೆ-ಸಹಕಾರಗಳನ್ನಿತ್ತರು. ಇದಲ್ಲದೆ ಇನ್ನೂ ಅನೇಕ ಮಹನೀಯರ ಸಹಾಯದಿಂದ ಈ ಸಂಸ್ಥೆ ಈಗ ಒಂದು ಹಂತಕ್ಕೆ ಬಂದು ನಿಂತು ತನ್ನ ಅಳಿಲು ಸೇವೆಗೈಯ್ಯುತ್ತಿದೆ. ಈ ಸಂಸ್ಥೆಯು ತನ್ನ ಮುಂದೆ ಇನ್ನೂ ಆಶಾದಾಯಕ ವಾದ ಕಾರ್ಯಕ್ರಮ ಯೋಜನೆಗಳನ್ನಿಟ್ಟುಕೊಂಡಿದೆ. ತನ್ನ ಕಾರ್ಯಕ್ಷೇತ್ರ ವನ್ನು ವಿಸ್ತರಿಸುವ ಹವಣಿಕೆಯಲ್ಲಿದೆ. ಇದೆಲ್ಲ ಕೆಲಸವಾಗಬೇಕಾದರೆ ಉದಾರ ಹೃದಯದ ಜನರ ಹಾಗೂ ಧ್ಯೇಯನಿಷ್ಠ ಯುವಕರ ಸಹಾಯ ಅತ್ಯವಶ್ಯವಿದೆ.

ಈ ಸಂಸ್ಥೆ ಬೆಳೆಯಬೇಕು; ಬೆಳೆದು ಕನ್ನಡಿಗರಿಗೆಲ್ಲ ಉಪಯುಕ್ತವಾಗ-ಬೇಕು. ಆಗ ದಿವಂಗತ ಶ್ರೀ. ರಾಜಪುರೋಹಿತರ ಕನಸು ನನಸಾಗಿ, ಅವರ ಕೀರ್ತಿ ಸ್ಥಿರವಾಗಿ ನಿಂತು ಕನ್ನಡಿಗರಾದ ನಾವು ನಮ್ಮ ಪಾಲಿನ ಕರ್ತವ್ಯವನ್ನು ಮಾಡಿದಂತಾಗುತ್ತದೆ.

ಧಾರವಾಡ<br>೧೩-೧-೫೮ ರಾ. ಶ್ರೀ. ಹುಕ್ಕೇರಿಕರ

## ‘ಪರಾಗ’ ಪ್ರಕಟನೆಗಳು

| | |
|---|---|
| ದ್ಯಾವಾ ಪೃಥಿವೀ (ಕವನ) | ವಿ. ಕೃ. ಗೋಕಾಕ |
| ಪಡೆದು ಬಂದಿರಬೇಕು (ಏಕಾಂಕಗಳು) | ಲ. ಜೆ. ಬೇಂದ್ರೆ |
| ಕನ್ನಡ ಸಾಹಿತ್ಯ ದರ್ಶನ, ೧೯೫೭ | ಶ್ರೀನಿವಾಸ ಹಾವನೂರ |
| ಮರಾಠಿ ವಾಙ್ಮಯ ದರ್ಶನ | ಪಂಡಿತ ಆವಳೀಕರ |
| ಕವಿ ವಿನಾಯಕ | ನೆಗಳೂರ ರಂಗನಾಥ |



## ಶ್ರೀ ಹಾವನೂರರ ಅನ್ಯ ಕೃತಿಗಳು

| | |
|---|---|
| ಅವರು ಮತ್ತು ದೇವಕ್ಕ (ನೀಳ್ಗತೆಗಳು) | ೧೯೪೮ |
| ಹಿಂದೂ ಕೋಡ್ ಮಸೂದೆ | ೧೯೫೦ |
| ಗ್ರಂಥಾಲಯ ತಂತ್ರ | ೧೯೫೪ |
| ಅವಿವಾಹಿತೆ (ಸಾಮಾಜಿಕ ಸಮಸ್ಯೆ) | ೧೯೫೫ |
| ಕನ್ನಡ ಸಾಹಿತ್ಯ ದರ್ಶನ, ೧೯೫೭ | ೧೯೫೭ |

# ಶ್ರೀನಿವಾಸ ಹಾವನೂರ



ಶ್ರೀ ಹಾವನೂರ ಅವರು ಪ್ರಯೋಗ ಸಿದ್ಧರು. ಹೊಸ ದಾರಿ–ಹೊಸ ರೀತಿಯ ಬರವಣಿಗೆ--ವಿಚಾರ ಮಂಡನೆ ಅವರ ಲೇಖನದ ಸತ್ವ. ಕನ್ನಡದಲ್ಲಿ ಇಂಥದು ಇಲ್ಲ; ಅದನ್ನು ಕನ್ನಡಕ್ಕೆ ತರಬೇಕು, ಪ್ರಯೋಗ ಮಾಡಬೇಕು, ಎಂಬ ವಿಷಯದಲ್ಲಿ ಅವರಿಗೆ ಅಮಿತ ಆಶೆ. ಅವರು ಈ ಆಶಾ ಪೂರ್ತಿಗಾಗಿ ರಾತ್ರಿಯನ್ನು ಹಗಲಾಗಿ ಮಾಡಿ ದುಡಿಯ ಬಲ್ಲ, ದೇಹ-ಬುದ್ಧಿ ತೇಯ ಬಲ್ಲ ಕೃತು-ಕರ್ಮಶಾಲಿಗಳು. ಮಾತು ಚಿಕ್ಕಾಲಾದರೆ ಕೃತಿ ರಚನೆ ಅವರಲ್ಲಿ ಮುಕ್ಕಾಲು.

ಅವರ ಪ್ರಕಟಿತ ಸಾಹಿತ್ಯವಾದ 'ಅವರು ಮತ್ತು ದೇವಕ್ಕ'—ನೀಳ್ಗತೆಗಳ ಸಂಗ್ರಹ, ಅವಿವಾಹಿತೆ—ಪ್ರಬಂಧ. 'ಗ್ರೀಜಿಕರ ಕನ್ನಡ ಸಾಹಿತ್ಯ ದರ್ಶನ' ಹಾಗೂ 'ಗ್ರಂಥಾಲಯ ತಂತ್ರ', ತಾಂತ್ರಿಕವಾಗಿ ಕನ್ನಡದಲ್ಲಿಯ ಏಕಮೇವ ಕೃತಿಗಳು. ಅವರ ಬಿಡಿ ಕತೆಗಳಲ್ಲಿ 'ಅಂತಿಮ ವಾಸನೆ' ಎಂಬುದು ಕನ್ನಡದಲ್ಲಿಯ ಅತ್ಯುತ್ತಮ ಕಥಾ ಶ್ರೇಣಿಗೆ ಸೇರಬೇಕಾದ ಕತೆ. ಉತ್ತಮ ಕಾದಂಬರಿಗಳ ಸಂಗ್ರಹ ಕಥನಗಳನ್ನು ಹೇಳುವುದರಲ್ಲಿ ನಿಷ್ಣಾತರೆಂದೂ ಹೆಸರು ಗಳಿಸಿದ್ದಾರೆ.

ಇಷ್ಟು ದಿನ ಅವರು ಸೇಲ್ಸ ಟ್ಯಾಕ್ಸ ಖಾತೆಯಲ್ಲಿದ್ದವರು, ಅದಕ್ಕೆ ರಾಜೀನಾಮೆಯಿತ್ತು ಈಗೊಂದು ವರ್ಷದಿಂದ ಕರ್ನಾಟಕ ವಿಶ್ವವಿದ್ಯಾಲಯದ ಲೈಬ್ರರಿಯಲ್ಲಿ ಕೆಲಸಕ್ಕೆ ಸೇರಿದ್ದಾರೆ.